ಕನ್ನಡ ಕವಿ ಕಾವ್ಯಮಾಲೆ_೧

ಅಮರು ಕವಿ ವಿರಚಿತ

# ಅಮರು ಶತಕಮ್

ಅನುವಾದಕರು :

**ಆಸ್ಥಾನವಿದ್ವಾನ್, ಎಚ್. ಗಂಗಾಧರಶಾಸ್ತ್ರೀ**

ಕನ್ನಡ ಅಧ್ಯಾಪಕರು, ಬನುಮಯ್ಯನವರ ಹೈಸ್ಕೂಲ್, ಮೈಸೂರು.

ಪ್ರಕಾಶಕರು :

ಶಾರದಾ ಮಂದಿರ

೫೭೮ ಕೃಷ್ಣರಾಜವನಂ, ಮೈಸೂರು.

ಈ ಮಾಲೆಯ ಸಂಪಾದಕರು ಮತ್ತು ಪ್ರಕಾಶಕರು:

ಎಚ್. ಎಂ. ಶಂಕರನಾರಾಯಣರಾವ್, ಎಂ.ಎ.

*Head of the Department of Kannada*
*Sarada Vilas College, Mysore*

ಮೊದಲ ಮುದ್ರಣ ೧೯೫೪



ಬೆಲೆ: ಸಾಧಾರಣ ಪ್ರತಿ ೧-೮-೦
ಉತ್ತಮ ಪ್ರತಿ ೪-೦-೦

ಅಚ್ಚಿಟ್ಟವರು:

ಜಿ. ಎಚ್. ರಾಮರಾವ್, ಬಿ. ಎಸ್‌ಸಿ.
ಮೈಸೂರು ಪ್ರಿಂಟಿಂಗ್ ಮತ್ತು ಪಬ್ಲಿಷಿಂಗ್ ಹೌಸ್,
ಮೈಸೂರು

# ಮುನ್ನುಡಿ

ಈಗ ಕೆಲವು ತಿಂಗಳ ಹಿಂದೆ ನನ್ನ ಪ್ರಿಯಮಿತ್ರರಾದ ಶ್ರೀಮಾನ್ ಎಸ್. ವಿ. ಪರಮೇಶ್ವರ ಭಟ್ಟರೊಂದಿಗೆ ಅಮರು ಕವಿಯ "ಅಮರು ಶತಕ" ವನ್ನು ಅರ್ಥಮಾಡಿಕೊಳ್ಳಲು ಪ್ರಯತ್ನಮಾಡಿದಾಗ, ಅರ್ಥ ತಾತ್ಪರ್ಯಗಳನ್ನೊಳಗೊಂಡ, ಈ ತೆರನಾದ ಗ್ರಂಥವೊಂದನ್ನು ಅಚ್ಚು ಮಾಡಿಸಿದರೆ ಅನೇಕರಿಗೆ ಇದರಿಂದ ಅನುಕೂಲವಾಗುವುದೆಂಬ ಯೋಚನೆ ನಮ್ಮಲ್ಲಿ ಮೂಡಿತು. ನನ್ನ ಮಿತ್ರರು ಮಾಡಿದ ಈ ಸೂಚನೆಯನ್ನು ಅಂಗೀಕರಿಸಿ, ಮೈಸೂರು ನಗರದ ಬನುಮಯ್ಯನವರ ಹೈಸ್ಕೂಲಿನ ಕನ್ನಡ ಅಧ್ಯಾಪಕರೂ ನನ್ನ ಮಿತ್ರರೂ ಆದ ಆಸ್ಥಾನವಿದ್ವಾನ್ ಎಚ್. ಗಂಗಾಧರ ಶಾಸ್ತ್ರಿಗಳನ್ನು ನನಗಾಗಿ ಈ ಕೆಲಸ ಮಾಡಿಕೊಡುವಂತೆ ಕೇಳಿದಾಗ, ನನ್ನಲ್ಲಿ ಅವರಿಗಿದ್ದ ವಿಶ್ವಾಸದಿಂದ ಈ ಕೆಲಸ ಮಾಡಲು ಒಪ್ಪಿ ಈ ಶತಕಕ್ಕೆ ಅರ್ಥವನ್ನೂ ವಿಸ್ತಾರವಾದ ತಾತ್ಪರ್ಯವನ್ನೂ ಬರೆದು ಕೊಟ್ಟರು. ಕವಿಕಾವ್ಯ ಪ್ರಶಸ್ತಿಯಿಂದ ಕೂಡಿದ ಈ ಗ್ರಂಥ ಈ ಮಾಲೆಯ ಮೊದಲನೆಯ ಹೂವಾಗಿ ಅರಳಿದೆ.

ಇಲ್ಲಿ ಅನುಸರಿಸಿರುವ ಕ್ರಮ ಕನ್ನಡಕ್ಕೆ ಹೊಸದೇನೂ ಅಲ್ಲ. ಸಂಸ್ಕೃತ ಭಾಷೆಯಲ್ಲಿರುವ ಅಮೂಲ್ಯ ಗ್ರಂಥಗಳನ್ನು ಕನ್ನಡದಲ್ಲಿ ತಿಳಿಸಿ ಕೊಡುವ ಈ ತೆರನಾದ ಪ್ರಯತ್ನಗಳು ಹಿಂದೆ ಎಷ್ಟೋ ನಡೆದಿವೆ. ಆ ತೆರನಾದ ಪ್ರಯತ್ನಗಳಲ್ಲಿ ಇದೂ ಒಂದು. ತಕ್ಕ ಮಟ್ಟಿನ ಸಂಸ್ಕೃತದ ಪರಿಚಯವಿರುವವರಿಗೆ ಈ ವಿಧವಾದ ಗ್ರಂಥಗಳಿಂದ ಉಪಯೋಗ ವುಂಟೆಂದು ನಾನು ನಂಬಿದ್ದೇನೆ. ಸಂಸ್ಕೃತದಿಂದ ಹೀರಬಹುದಾದ, ತಂದು ಬೀರಬಹುದಾದ ಅಂಶಗಳು ಬಹುವಾಗಿ ಉಂಟೆಂದು ನಮ್ಮ ಜನ ಅರಿತುಕೊಳ್ಳುತ್ತಿದ್ದಾರೆ. ಇದು ಒಂದು ಶುಭ ಸೂಚನೆ. ಕನ್ನಡಕ್ಕೆ ಸಂಸ್ಕೃತ ಭಾಷೆಯ ಮುಖ್ಯ ಗ್ರಂಥಗಳು ಪರಿವರ್ತಿತವಾದರೆ ಆ ಭಾಷೆ ಬದುಕುತ್ತದೆ, ಕನ್ನಡ ಬೆಳೆಯುತ್ತದೆ. ನಮ್ಮ ಜನರಿಗೆ ವಿಷಯವನ್ನು ತಿಳಿಸಿಕೊಡಲು ಮಾಡಿರುವ ಈ ಪ್ರಯತ್ನದಲ್ಲಿ ಕಂಡು ಬರುವ ತಪ್ಪು ಗಳನ್ನು ಬಲ್ಲವರು ಮನ್ನಿಸಬೇಕು.

ಅಮರು ಕವಿಯ ಮತ್ತು ಅವನ ಕಾವ್ಯವನ್ನು ಕುರಿತಾದ ಲೇಖನವನ್ನು ಬರೆಯಲು ನಾಲ್ಕಾರು ಕಡೆಗಳಿಂದ ದೊರೆತ ಸಾಧನ ಸಾಮಗ್ರಿಗಳನ್ನು ಇಲ್ಲಿ ಉಪಯೋಗಿಸಿಕೊಳ್ಳಲಾಗಿದೆ. ನನ್ನ ಮಿತ್ರರು ಬರೆದುಕೊಟ್ಟ ವಿಸ್ತಾರವಾದ ತಾತ್ಪರ್ಯವನ್ನು ಗ್ರಂಥ ವಿಸ್ತಾರ ಭಯದಿಂದ ಸಂಗ್ರಹಿಸಿದೆ. ಈ ಗ್ರಂಥಕ್ಕೆ ಅವರಿಂದಲೇ ಬರೆಯಿಸಬೇಕೆಂದಿದ್ದ ಟಿಪ್ಪಣಿಗಳನ್ನು ಬರೆಯಿಸಲು ಸಾಧ್ಯವಾಗಲಿಲ್ಲ. ಇದರಲ್ಲಿ ಕಂಡು ಬರುವ ಲೋಪದೋಷಗಳನ್ನು ವಿದ್ವಾಂಸರು ತಿಳಿಸಿಕೊಟ್ಟಲ್ಲಿ ಮುಂದಿನ ಮುದ್ರಣಕ್ಕೆ ಅವುಗಳನ್ನು ತಿದ್ದಿಕೊಂಡು ಗ್ರಂಥದ ಉಪಯುಕ್ತತೆಯನ್ನು ಹೆಚ್ಚಿಸಲು ಯತ್ನಿಸಲಾಗುತ್ತದೆ. ನನ್ನ ಕೋರಿಕೆಯನ್ನು ನೆರವೇರಿಸಿಕೊಟ್ಟು ನಾನು ಕೊಟ್ಟ ತೊಂದರೆಗಳನ್ನು ತಾಳ್ಮೆಯಿಂದ ಸಹಿಸಿಕೊಂಡು ಸಹಾಯ ಮಾಡಿದ ನನ್ನ ಹಿರಿಯ ಮಿತ್ರರಾದ ಶ್ರೀಮಾನ್ ಎಚ್. ಗಂಗಾಧರ ಶಾಸ್ತ್ರಿಗಳಿಗೂ ಈ ವಿಷಯಕ್ಕೆ ಸಂಬಂಧಿಸಿದ್ದ ಗ್ರಂಥಗಳನ್ನೂ ಲೇಖನಗಳನ್ನೂ ನನ್ನ ಗಮನಕ್ಕೆ ತಂದು, ಈ ರೀತಿಯಲ್ಲಿ ಗ್ರಂಥ ರೂಪುಗೊಳ್ಳಲು ಬಹು ವಿಧವಾಗಿ ಸಹಾಯಮಾಡಿದ ಮಿತ್ರ ಶ್ರೀ ಎಸ್. ವಿ. ಪರಮೇಶ್ವರ ಭಟ್ಟರಿಗೂ, ಅತ್ಯಲ್ಪ ಕಾಲದಲ್ಲಿಯೇ ಗ್ರಂಥವನ್ನು ಮುದ್ದಾಗಿ ಮುದ್ರಿಸಿದ ಪ್ರಿಯಮಿತ್ರ ಜಿ. ಎಚ್. ರಾಮರಾವ್ ಇವರಿಗೂ, ನನ್ನ ಅನಂತ ವಂದನೆಗಳು. ಈ ಮಾರ್ಗದಲ್ಲಿ ನನಗೆ ದಾರಿ ತೋರಿಸಿದ ಹಿರಿಯ ಲೇಖಕರಿಗೂ ಗ್ರಂಥಕರ್ತರಿಗೂ ನನ್ನ ವಂದನೆಗಳು.

ಶಾರದಾ ಮಂದಿರ **ಎಚ್. ಎಂ. ಶಂಕರನಾರಾಯಣರಾವ್**
೫೭೭ ಕೃಷ್ಣರಾಜವನಂ ಸಂಪಾದಕ
ವಿಜಯ ಸಂ. ಶ್ರೀರಾಮನವಮಿ

# ಮೊದಲ ಮಾತು

ನವರಸಗಳಲ್ಲಿ ಶೃಂಗಾರವು ಮೊದಲನೆಯದಾಗಿರುವಂತೆ, ಶೃಂಗಾರ ರಸಪ್ರಧಾನವಾದ ಕಾವ್ಯಗಳಲ್ಲಿ ಅಮರು ಶತಕಕ್ಕೆ ಪ್ರಥಮಸ್ಥಾನವಿದೆ. ವ್ಯಂಗ್ಯಮರ್ಯಾದೆಯಿಂದ ತೋರಿಬರುವ ಶೃಂಗಾರಕ್ಕೆ ವಿದ್ವಾಂಸರ ಮೆಚ್ಚುಗೆ ದೊರೆಯುವಂತೆ, ವಾಚ್ಯವಾಗಿ ಬಿಂಬಿಸುವ ಆ ರಸಕ್ಕೆ ಮನ್ನಣೆ ದೊರೆಯದು. ಆದ್ದರಿಂದಲೇ ಲಕ್ಷಣಕಾರರು ತಾವು ವಿವರಿಸುವ ಈ ರಸಭಾವಾದಿಗಳಿಗೆ ಈ ಕವಿಯ ಶ್ಲೋಕಗಳನ್ನೇ ಉದಾಹರಿಸಿರುವರು. ಇಷ್ಟು ಸರ್ವಾಂಗಸುಂದರವಾದ ಕಾವ್ಯವನ್ನು ಪ್ರಾಯಶಃ ಅಮರುಕವಿ ಅನಾಯಾಸವಾಗಿ ಬರೆದಿರಬಹುದು. ಏಕೆಂದರೆ ಈ ಶ್ಲೋಕಗಳಲ್ಲಿ ಎಲ್ಲೆಲ್ಲಿ ಹುಡುಕಿದರೂ ಕಷ್ಟಪಟ್ಟು ತುಂಬಿಟ್ಟಿರುವ ಪದಗಳೇ ಕಾಣ ಬರುವುದಿಲ್ಲ ಶ್ಲೋಕಸರಣಿ ಅಷ್ಟು ಲಲಿತವಾಗಿದ್ದರೂ ಅರ್ಥ ಗಾಂಭೀರ್ಯ ಮಾತ್ರ ಸುಲಭವಾಗಿಲ್ಲ. ಇದನ್ನು ಕನ್ನಡಿಸಬೇಕೆಂದು ನನ್ನ ಮಿತ್ರ ರಾದ ಶ್ರೀಮಾನ್ ಎಚ್. ಎಂ. ಶಂಕರನಾರಾಯಣರಾಯರು ಹೇಳಿದಾಗ ನನಗೆ ಭಯವೂ ಆಶ್ಚರ್ಯವೂ ಆಯಿತು. ಅಲ್ಲದೆ ರಸಿಕರ ಬಾಯಿಂದ ಬರುವ ಸಂಸ್ಕೃತಪದಗಳನ್ನು ಕನ್ನಡದಲ್ಲಿ ಹೇಳುವುದೆಂದರೆ ಅದೊಂದು ರಸಾಭಾಸವೇ. ಶೃಂಗಾರರಸದ ಪದಗಳು ಎಷ್ಟು ಗಂಭೀರವಾಗಿದ್ದರೆ ಅಷ್ಟು ಸೊಗಸು. ಇದನ್ನು ನಾನು ಕನ್ನಡಭಾಷೆಗೆ ಅನುವಾದ ಮಾಡಿ ಟ್ಟರೆ ಮೂಲಕಾವ್ಯದ ಸೊಗಸನ್ನು ಎಲ್ಲಿ ಕೆಡಿಸುವೆನೋ ಎಂಬ ಭಯ ಮೂಡಿತು. ಅಲ್ಲದೆ ಸಾಹಿತ್ಯಪ್ರಪಂಚದಲ್ಲಿ ಈ ರೀತಿಯ ಕಾವ್ಯಗಳು ವಾಚಕರ ಮನಸ್ಸನ್ನು ಯಾವ ರೀತಿಗೆ ಸೆಳೆಯುವುವೋ ಎಂಬ ಶಂಕೆಯೂ ಉಂಟಾಯಿತು. ಸಂಸ್ಕೃತಭಾಷಾಭಿಜ್ಞರಿಗೆ ಈ ರೀತಿಯ ಕಾವ್ಯಗಳು ಅಪೂರ್ವಗಳಲ್ಲ. ಕನ್ನಡಿಗರಿಗೆ ಮಾತ್ರ ಇದು ಕೇವಲ ಹೊಸದು. ಆದರೆ ಈಗಿನ ಕನ್ನಡಿಗರು ಎಲ್ಲ ಭಾಷೆಯ ಗ್ರಂಥಗಳನ್ನೂ ಕನ್ನಡಭಾಷೆಗೆ ತರಿಸಬೇಕೆಂದು ಯತ್ನಿಸುತ್ತಿರುವರೆಂಬ ನಂಬಿಕೆಯಿಂದ ಈ ನನ್ನ

ಮಿತ್ರರ ಬೆಂಬಲದಿಂದ ಧೈರ್ಯವಾಗಿ ಇದರ ಅನುವಾದಕ್ಕೆ ಪ್ರಯತ್ನಿಸಿದೆ. ಅಮರುಕವಿಯ ಗ್ರಂಥವನ್ನು ಪರಿವರ್ತಿಸುವಷ್ಟು ಪಾಂಡಿತ್ಯ ನನ್ನಲ್ಲಿಲ್ಲ. ಆದರೂ ನನ್ನ ಈ ಒರಟುಧೈರ್ಯಕ್ಕೆ ವಾಚಕರ ಪ್ರೋತ್ಸಾಹ ದೊರೆತೀತು ಎಂದು ನಂಬಿ ಅನುವಾದಕಾರ್ಯವನ್ನು ಮುಗಿಸಿರುವೆನು. ಈ ಅನುವಾದ ದಲ್ಲಿ ಏನಾದರೂ ಸ್ವಾರಸ್ಯವಿದ್ದರೆ ಅದು ಅಮರು ಮಹಾಕವಿಗೆ ಸೇರಿ ದುದು. ಅಸ್ವಾರಸ್ಯವು ಮಾತ್ರ ನನ್ನದೇ.

ಇಟ್ಟಿಗೆಗೂಡು ಬಡಾವಣೆ
ಮೈಸೂರು.

ಎಚ್. ಗಂಗಾಧರಶಾಸ್ತ್ರೀ.

# ಪೀಠಿಕೆ

## ೧. ಕವಿಚರಿತ್ರೆ

ನೂರು ಪ್ರೇಮಗೀತೆಗಳನ್ನೊಳಗೊಂಡು "ಅಮರು ಶತಕ" ವೆಂಬ ಹೆಸರಿನಿಂದ ಪ್ರಖ್ಯಾತಿಗೊಂಡು ಸಾವಿರಾರು ವರ್ಷಗಳಿಂದಲೂ ರಸಿಕರಿಗೊಂದು ಹಬ್ಬವೆನಿಸಿರುವ ಈ ಕಿರುಕಾವ್ಯವನ್ನು ರಚಿಸಿದ ಕವಿ ಅಮರು ಇಲ್ಲವೆ ಅಮರುಕ. ಸಹೃದಯರ ಸಮೂಹದಲ್ಲಿ ಇಷ್ಟರಮಟ್ಟಿಗೆ ಕೀರ್ತಿಯನ್ನು ಗಳಿಸಿರುವ ಕವಿಯ ಕಾಲ ಕುಲ ಗೋತ್ರ ಈತನು ಪಡೆದ ಸಂಸ್ಕಾರ ಹೊಂದಿದ್ದ ರಾಜಾಶ್ರಯ ಇವುಗಳೊಂದೂ ನಮಗೆ ತಿಳಿದು ಬಾರವು. ಕವಿ ಅಕ್ಕಸಾಲೆಯ ಕುಲಕ್ಕೆ ಸೇರಿದವನೆಂಬ ಪ್ರತೀತಿಯೊಂದುಂಟು.[1] ಈ ಹೇಳಿಕೆಗೆ ಎಷ್ಟರ ಮಟ್ಟಿಗೆ ಬೆಲೆ ಕೊಡಬೇಕೋ ತಿಳಿಯದು. ಸಂಸ್ಕೃತಸಾಹಿತ್ಯದಲ್ಲಿ ಕವಿಗಳಿಗೆ ಆಶ್ರಯದಾತನಾದ ವಿಕ್ರಮಾದಿತ್ಯನ ಆಸ್ಥಾನದ ನವಮಣಿಗಳಲ್ಲಿ ಇವನು ಒಬ್ಬನಾಗಿದ್ದನೆಂದೂ, ಆದರೆ ಇವನು ಕಾಳಿದಾಸನ ಸಮಕಾಲೀನನಾಗಿರುವಷ್ಟು ಪ್ರಾಚೀನನಲ್ಲವೆಂದೂ ಡಾ|| ಎ. ಬಿ. ಕೀತರವರು ಹೇಳುತ್ತಾರೆ. ಈ ಶತಕದ ಮೇಲೆ ವ್ಯಾಖ್ಯಾನವನ್ನು ರಚಿಸಿರುವ ರವಿಚಂದ್ರನು ಈ ಕಾವ್ಯದ ಕರ್ತೃತ್ವವನ್ನು ಅದ್ವೈತಸಿದ್ಧಾಂತದ ಪ್ರವರ್ತಕರಾದ ಶ್ರೀ ಶಂಕರಾಚಾರ್ಯರ ತಲೆಗೆ ಕಟ್ಟಿದ್ದಾನೆ. ಶ್ರೀ ವಿದ್ಯಾರಣ್ಯರಿಂದ ರಚಿತವಾಗಿ 'ಶಂಕರ ವಿಜಯ'ದಲ್ಲಿ ಬರುವ ವೃತ್ತಾಂತವೇ ರವಿಚಂದ್ರನ ಹೇಳಿಕೆಗೆ ಆಧಾರವೆಂದು ತೋರುತ್ತದೆ. ಆ ವೃತ್ತಾಂತವನ್ನು ಕೆಳಗೆ ಸಂಗ್ರಹಿಸಿದೆ.

---

1. ವಿಶ್ವಪ್ರಖ್ಯಾತನಾಡಿಂಧಮಕುಲತಿಲಕೋ ವಿಶ್ವಕರ್ಮಾದ್ವಿತೀಯಃ Introduction to Subhashitavali by P. Peterson, p. 2

2. 'He figures as one of the gems of the Court of Vikramaditya, but it is impossible to suppose that he was really a contemporary of Kalidasa' Classical Sanskrit Literature A. B. Keith, p. 116

3. ಅಮರುಶತಕದ ಸಂಸ್ಕೃತದ ಮುನ್ನುಡಿ— ನಿರ್ಣಯ ಸಾಗರದ ಮುದ್ರಣ.

ಶಂಕರಾಚಾರ್ಯರು ತಮ್ಮ ದಿಗ್ವಿಜಯದ ಸಮಯದಲ್ಲಿ ಅನೇಕ ವಿದ್ವಾಂಸರನ್ನು ಗೆದ್ದು, ಪ್ರಸಿದ್ಧ ವಿದ್ವಾಂಸರೆನಿಸಿಕೊಂಡಿದ್ದ ಮಂಡನ ಮಿಶ್ರರನ್ನು ವಾದದಲ್ಲಿ ಜಯಿಸಲು ಮಾಹಿಷ್ಮತೀನಗರಕ್ಕೆ ಬಂದರು. ವಿದ್ವಾಂಸರಿಬ್ಬರಿಗೂ ನಡೆದ ವಾದದಲ್ಲಿ ಮಂಡನಮಿಶ್ರರು ಸೋತು ಹೋದರು. ಆದರೇನು ? ಆಚಾರ್ಯರು ಮಂಡನಮಿಶ್ರರನ್ನು ಅರ್ಧ ಗೆದ್ದಂತಾಗಿತ್ತು. ಮಂಡನಮಿಶ್ರರ ಹೆಂಡತಿಯಾದ ಶಾರದೆಯನ್ನು ಗೆಲ್ಲುವವರೆಗೂ ಆಚಾರ್ಯರ ಜಯ ಸಂಪೂರ್ಣವಾಗುವಂತಿರಲಿಲ್ಲ. ಸೋತವರು ಗೆದ್ದವರ ಆಶ್ರಮವನ್ನು ಸ್ವೀಕರಿಸಬೇಕಾಗಿತ್ತು. ತನ್ನ ಗಂಡನುಸಂನ್ಯಾಸಿಯಾಗುವನೆಂದರಿತು ಹೊಟ್ಟೆಯುರಿದುಕೊಂಡ ಶಾರದೆ, ಆಚಾರ್ಯರನ್ನು ವಾದಕ್ಕೆ ಕರೆದಳು. ಹದಿನೇಳುದಿನ ಅಖಂಡವಾಗಿ ನಡೆದ ವಾದದಲ್ಲಿ ಶಾರದೆ ಆಚಾರ್ಯರಿಗೆ ಸೋತು ಹೋದಳು. ಆದರೆ ಶಂಕರರನ್ನು ಸೋಲಿಸುವ ಹಟವನ್ನು ಆಕೆ ಬಿಟ್ಟುಕೊಡದೆ ಅವರನ್ನು ಕಾಮಶಾಸ್ತ್ರದಲ್ಲಿ ಪ್ರಶ್ನೆಮಾಡಿದಳು. ಆಚಾರ್ಯರಿಗೆ ಈಗ ಒಳ್ಳೆಯ ಧರ್ಮಸಂಕಟಪ್ರಾಪ್ತವಾಯಿತು. ಶಾರದೆಯ ಪ್ರಶ್ನೆಗೆ ಉತ್ತರ ಹೇಳಿ ಯಾರೇ ಧರ್ಮಲೋಪವುಂಟಾಗುತ್ತದೆ; ಹೇಳದಿದ್ದರೆ ಆಚಾರ್ಯರ ಸರ್ವಜ್ಞತ್ವ ಹಾರಿಹೋಗುತ್ತದೆ. ಈ ಧರ್ಮಸಂಕಟವನ್ನು ಅರಿತು ಆಚಾರ್ಯರು ಆಕೆಯಿಂದ ಒಂದು ತಿಂಗಳು ಗಡುವನ್ನು ಪಡೆದು ಕೊಂಡು, ತಮ್ಮ ದೇಹವನ್ನು ಗುಹೆಯೊಂದರಲ್ಲಿ ಶಿಷ್ಯರ ರಕ್ಷಣೆಗಿಟ್ಟು ಆಗ ತಾನೆ ಸತ್ತಿದ್ದ ಅಮರಕರಾಜನ ದೇಹವನ್ನು ಪ್ರವೇಶಿಸಿದರು. ಸತ್ತದೊರೆ ಬದುಕಿದುದರಿಂದ ಅಂತಃಪುರದ ಸ್ತ್ರೀಯರೂ, ಪರಿವಾರ ದವರೂ, ಮಂತ್ರಿಗಳೂ ಅಷ್ಟೇ ಅಲ್ಲ; ದೇಶಕ್ಕೆ ದೇಶವೇ ನಲಿಯಿತು. ದೇಶದಲ್ಲಿ ಮಳೆಬೆಳೆಗಳಾಗಿ ಸುಭಿಕ್ಷ ತಲೆದೋರಿತು. ಅಮರಕನ ದೇಹ ವನ್ನು ಹೊಕ್ಕ ಚೈತನ್ಯ ಸಾಮಾನ್ಯವಾದುದಾಗಿರಲಿಲ್ಲ. ಇದನ್ನರಿತ ಮಂತ್ರಿಗಳು ಈ ಚೈತನ್ಯ ದೊರೆಯ ದೇಹವನ್ನು ಬಿಟ್ಟುಹೋಗದಂತೆ ಜಾಗರೂಕರಾಗಿದ್ದರು. ಪರಕಾಯ ಪ್ರವೇಶಮಾಡಿದ ಆಚಾರ್ಯರು ಅಂತಃಪುರದಲ್ಲಿ ಅನೇಕ ಭೋಗಗಳನ್ನು ಅನುಭವಿಸಿ ಒಂದು ಪ್ರಣಯ

ಪ್ರಬಂಧವನ್ನು ರಚಿಸಿದರು.[4] ಶಾರದೆಗೆ ಹೇಳಿದ ಅವಧಿ ಬರುತ್ತಲೇ ಆಚಾರ್ಯರು ರಾಜನ ದೇಹವನ್ನು ಬಿಟ್ಟು ತಮ್ಮ ದೇಹವನ್ನು ಹೊಕ್ಕು ಮಂಡನಮಿಶ್ರರ ಪತ್ನಿಯನ್ನು ಸೋಲಿಸಿದರು.

ವಿದ್ವಾಂಸರಾರೂ ಈ ಕಥೆಯನ್ನು ನಂಬುವುದಿಲ್ಲ. ಶಂಕರಾಚಾರ್ಯರೇ ಈ ಶತಕದ ರಚಕರೆನ್ನುವುದಕ್ಕೆ ಆಂತರಿಕವಾದ ಪ್ರಮಾಣಗಳಾವುವೂ ಈ ಗ್ರಂಥದಲ್ಲಿ ದೊರಕವು.

ಕವಿಯ ಕಾಲವೂ ಅನಿಶ್ಚಿತ. ಸ್ಥೂಲವಾಗಿ ಅದನ್ನು ಈ ರೀತಿಯಲ್ಲಿ ಗೊತ್ತುಮಾಡಬಹುದು. 'ಕಾವ್ಯಾಲಂಕಾರ ಸೂತ್ರ' ವನ್ನು ರಚಿಸಿದ ವಾಮನನು ಅಮರು ಕವಿಯ ಹೆಸರನ್ನು ಹೇಳದಿದ್ದರೂ ಅವನ ಶ್ಲೋಕಗಳನ್ನು ತನ್ನ ಗ್ರಂಥದಲ್ಲಿ ಉದಹರಿಸಿದ್ದಾನೆ. ಆದ್ದರಿಂದ ಅಮರು ವಾಮನನಿಗಿಂತ ಪ್ರಾಚೀನನೆಂಬುದು ಸ್ಪಷ್ಟವಾದಂತಾಯಿತು. ಆದರೆ ಕವಿ ವಾಮನನಿಗಿಂತ ಎಷ್ಟು ಹಿಂದಿನವನೆಂಬುದು ಇನ್ನೂ ತೀರ್ಮಾನವಾಗಿಲ್ಲ. ವಾಮನನ ಕಾಲ ಸುಮಾರು, ಕ್ರಿ.ಶ. ೮೦೦[5]

ಅಮರು ಸಹೃದಯರಿಗೆ ಆಲಂಕಾರಿಕರಿಗೆ ಸುಭಾಷಿತಕಾರರಿಗೆ ತುಂಬ ಪ್ರಿಯನಾದ ಕಾರಣ ಈ ಶತಕದ ನಾಲ್ಕಾರು ಪರಿಷ್ಕರಣಗಳು

---

4. ವಾತ್ಸಾಯನ ಪ್ರೋದಿತಸೂತ್ರಜಾತಂ
ತದೀಯ ಭಾಷ್ಯಂಚ ನಿರೀಕ್ಷ್ಯ ಸಮ್ಯಕ್ ।
ಸ್ವಯಂ ವ್ಯಧತ್ತಾಭಿನವಾರ್ಥ ಗರ್ಭಂ
ನಿಬಂಧಮೇಕಂ ನೃಪವೇಷಧಾರೀ ॥ ವಿದ್ಯಾರಣ್ಯವಿರಚಿತ
ಶಂಕರವಿಜಯ, ೧೦-೧೮

**ಅಮರುಕದೊರೆ ಕಾಶ್ಮೀರದವನೆಂದೂ ಅವನ ಅಂತಃಪುರದಲ್ಲಿದ್ದ ನೂರು ಜನ ಹೆಂಗಸರೊಡನೆ ಆಚಾರ್ಯರು ಅನುಭವಿಸಿದ ಭೋಗದ ವರ್ಣನೆ ಈ ಶತಕದಲ್ಲಿದೆಯೆಂದು ಒಂದು ಪ್ರತೀತಿಯಿದೆಯಂತೆ.** Studies in Sanskrit Literature : C.R.N. p. 3

5 See History of Sanskrit Poeties, P.V. Kane,

(Recensions) ನಮಗೆ ದೊರಕುತ್ತವೆ.[6] ಈ ಪರಿಷ್ಕರಣಗಳಲ್ಲಿ ಪದ್ಯಗಳ ಜೋಡಣೆಯ ಕ್ರಮವೂ ತುಂಬ ವ್ಯತ್ಯಾಸವಾಗಿರುವಂತೆ ಕಂಡು ಬರುತ್ತದೆ. ಈ ಎಲ್ಲ ಪರಿಷ್ಕರಣಗಳಿಗೂ ಸಮಾನವಾಗಿ ದೊರಕುವ ಪದ್ಯಗಳ ಸಂಖ್ಯೆ ಸುಮಾರು ಐವತ್ತು. ಈ ಶತಕದ ಒಟ್ಟು ಪದ್ಯಗಳ ಸಂಖ್ಯೆ ತೊಂಬತ್ತರಿಂದ ನೂರ ಹದಿನೈದರವರೆಗೆ ತೂಗಾಡುತ್ತದೆ.[7] ಅಷ್ಟೇ ಅಲ್ಲ; ಸುಭಾಷಿತ ಗ್ರಂಥಗಳಲ್ಲಿ ಅಮರು ಕವಿಯದೆಂದು ಹೇಳಿರುವ ಪದ್ಯಗಳೆಲ್ಲ ಈ ಶತಕದಲ್ಲಿ ದೊರಕುವುದಿಲ್ಲ. ಈ ಶತಕದ ಪಾಠ ಪರಿಷ್ಕರಣ,ನಿಷ್ಕರ್ಷೆ ಯಾಗಿ ಇನ್ನೂ ಒಂದು ನೆಲೆಗೆ ಬಂದಿಲ್ಲ. ಶಾರ್ದೂಲ ವಿಕ್ರೀಡಿತವೃತ್ತದಲ್ಲಿ ಬರೆದಿರುವ ಪದ್ಯಗಳು ಮಾತ್ರ ಅಮರುಕವಿಕೃತವೆಂಬ ವಾದವೊಂದುಂಟು. ಈ ವಾದವನ್ನು ಒಪ್ಪಿದರೂ ಶತಕದ ನೂರರ ಸಂಖ್ಯೆಯನ್ನು ಪೂರ್ತಿಗೊಳಿಸಲು ಇನ್ನೂ ಅನೇಕ ಶಾರ್ದೂಲ ವಿಕ್ರೀಡಿತದ ಪದ್ಯಗಳು ಬೇಕಾಗುತ್ತವೆ. ಏಕೆಂದರೆ ಈಗ ದೊರೆಯುವ ಶಾರ್ದೂಲವಿಕ್ರೀಡಿತದ ಪದ್ಯಗಳು ಸುಮಾರು ಅರವತ್ತು ಈ ವಾದದಿಂದ ಫಲಿತವಾಗುವ ಅಂಶವಿಷ್ಟೇ. ಕವಿಗೆ ಶಾರ್ದೂಲವಿಕ್ರೀಡಿತ ವೃತ್ತವೆಂದರೆ ತುಂಬ ಪ್ರೀತಿಯಿರಬಹುದು.

ಅಮರುಕವಿಯ ಈ ಶತಕದ ಪದ್ಯಗಳು 'ಮುಕ್ತಕ'ವೆಂಬ ಕಾವ್ಯಭೇದಕ್ಕೆ ಸೇರಿದವು. ಈ ಪದ್ಯಗಳ ಸವಿಯನ್ನು ಸವಿಯುವುದಕ್ಕೆ ಮುಂಚೆ 'ಭಾವಗೀತೆ'ಯನ್ನೂ 'ಮುಕ್ತಕ'ವನ್ನೂ ಕುರಿತು ಒಂದೆರಡು ಮಾತುಗಳನ್ನಾಡಿದರೆ ಅಪ್ರಕೃತವೆನಿಸಲಾರದು.

## ೨. ಭಾವಗೀತೆ

ಕನ್ನಡ ಸಾಹಿತ್ಯದಲ್ಲಿ ಭಾವಗೀತೆಯ ಪ್ರಚಾರ ಇತ್ತೀಚೆಗೆ ಕಂಡು ಬರುತ್ತಿದೆ. ಪಾಶ್ಚಾತ್ಯ ಸಾಹಿತ್ಯದೊಂದಿಗೆ ನಮ್ಮ ಸಾಹಿತ್ಯ ಪಡೆದ

---

6 ಕೀತರು ನಾಲ್ಕು ಪರಿಷ್ಕರಣಗಳನ್ನು ಹೇಳುತ್ತಾರೆ. ದಕ್ಷಿಣದೇಶದ್ದು (ವೇಮಭೂಪಾಲನ ವ್ಯಾಖ್ಯಾನ); ಬಂಗಾಳ (ರವಿಚಂದ್ರನ ವ್ಯಾಖ್ಯಾನ) ಅರ್ಜುನಮಿತ್ರನ ಪಾಠ; ಮಿಶ್ರಪಾಠ (ರಾಮರುದ್ರ, ರುದ್ರಮ ದೇವ) A History of Sanskrit Literature, P. 183 A.B. Keith

7 C.R.N. Studies in Sanskrit Literature Page 3

ಸಂಪರ್ಕದ ಫಲವಾಗಿ ಭಾವಗೀತೆ ಕನ್ನಡದಲ್ಲಿ ಹೆಚ್ಚು ಹೆಚ್ಚಾಗಿ ರೂಪುಗೊಳ್ಳುತ್ತಿದೆ. ಹಿಂದಿನ ಕಾಲದಲ್ಲಿ ಕವಿಗಳ ಗಮನವನ್ನೆಲ್ಲ ಮಹಾಕಾವ್ಯಗಳು ಸೆಳೆದಿದ್ದರೆ, ಇಂದಿನ ಕವಿಹೃದಯವನ್ನು ಭಾವಗೀತೆ ಹೆಚ್ಚು ಹೆಚ್ಚಾಗಿ ಆಕ್ರಮಿಸಿದೆ. ಈ ಹೇಳಿಕೆಯಿಂದ ನಮ್ಮ ಸಾಹಿತ್ಯದಲ್ಲಿ ಭಾವಗೀತೆ ಪ್ರಚಾರದಲ್ಲಿರಲಿಲ್ಲವೆಂದು ಅರ್ಥವಲ್ಲ. ಮಹಾಕಾವ್ಯಗಳ ರಚನೆಯ ಕಡೆಗೆ ಗಮನಕೊಟ್ಟ ನಮ್ಮ ಕವಿಗಳು ಇದರ ರಚನೆಯ ಕಡೆಗೆ ಅಷ್ಟಾಗಿ ಗಮನಕೊಡಲಿಲ್ಲ. ಭಾವಗೀತೆ ಎಂಬ ಪದ ನಮಗೆ ಹೊಸದು; ಅಷ್ಟೇ. ಇಂಗ್ಲೀಷಿನಲ್ಲಿ ಪ್ರಚಾರದಲ್ಲಿರುವ ' ಲಿರಿಕ್ ' ಎಂಬ ಪದಕ್ಕೆ ಕನ್ನಡದಲ್ಲಿ ' ಭಾವಗೀತೆ ' ಸಮನಾರ್ಥಕ ಪದ. ನಮ್ಮಲ್ಲಿಯೂ ' ಮೇಘಸಂದೇಶ ' ದಂತಹ ಉತ್ತಮವಾದ ಹಲವಾರು ಭಾವಗೀತೆಗಳಿವೆ. ಅಷ್ಟೇಕೆ? ಮಹಾಕಾವ್ಯಗಳ ಎಷ್ಟೋ ಭಾಗಗಳು ಭಾವಗೀತೆಗಳೇ. ಭಕ್ತಿ ಪ್ರಧಾನವಾದ ಹರಿಹರನ ಶತಕಗಳೂ, ಹರಿದಾಸರ ಗೀತೆಗಳೂ, ಶಿವಶರಣರ ವಚನಗಳೂ, ಉತ್ತಮ ಭಾವಗೀತೆಗಳೆಂದು ಧಾರಾಳವಾಗಿ ಹೇಳಬಹುದು.

ಭಾವಗೀತೆಯೆಂಬ ಹೆಸರೇ ಅದರ ಸ್ವರೂಪವನ್ನು ಸ್ಪಷ್ಟಪಡಿಸುತ್ತದೆ. ಈ ಕವಿತೆಯಲ್ಲಿ ಕವಿಯ ಹೃದಯದಲ್ಲಿ ಹೊರಹೊಮ್ಮುವ ವೈಯಕ್ತಿಕವಾದ ಭಾವಗಳಿಗೇ ಹೆಚ್ಚು ಪ್ರಾಧಾನ್ಯ. ಇದರಲ್ಲಿ ಗೀತೆಯ ಅಂಶವೂ ಉಂಟು. ಲಿರಿಕ್ ಕವಿತೆಯ ಮೂಲದ ಅರ್ಥವೇ ಇದೆಂದು ಬಲ್ಲವರು ಹೇಳುತ್ತಾರೆ. ತಂತೀವಾದ್ಯಕ್ಕೆ ಹೊಂದುವಂತೆ ಹಾಡಲು ರಚಿತವಾದ ಕವಿತೆಗೆ ಲಿರಿಕ್ ಕವಿತೆಯೆಂದು ಕರೆಯುವುದು ರೂಢಿಯಾಯಿತು.[8] ಈ ಅರ್ಥದಲ್ಲಿ ಹಳೆಯ ಲಾವಣಿಗಳನ್ನೂ, ಮೊದಮೊದಲು ರಚಿತವಾದ ಇತಿಹಾಸ ಕಾವ್ಯಗಳನ್ನೂ ಭಾವಗೀತೆಗಳೆಂದು ಕರೆಯಬೇಕಾಗುತ್ತದೆ. ಒಂದು ದೃಷ್ಟಿಯಿಂದ ನೋಡಿದರೆ ಸಮಸ್ತ ಕವಿತೆಗೂ ಭಾವಗೀತೆಯೆಂಬ ಹೆಸರು ಒಪ್ಪುತ್ತದೆ. ಕವಿಯು ಸುತ್ತಲ ಪ್ರಪಂಚ

---

[8] Lyric Poetry, in the original meaning of the term, was poetry composed to be sung to the accompainment of lyre or harp–An Introduction to the study of Literature William Henry Hudson Page 96.

ವನ್ನು ನೋಡಿ, ಅದರ ಸತ್ಯಸೌಂದರ್ಯಗಳನ್ನು ಅನುಭವಿಸಿ, ಮನನ ಮಾಡಿ ಮಾತುಗಳ ಮೂಲಕ ಅವುಗಳಿಗೆ ರೂಪುಕೊಟ್ಟು ಚೆಲುವಿನ ಬೇರೊಂದು ಪ್ರಪಂಚವನ್ನು ಸೃಷ್ಟಿ ಮಾಡುವನಷ್ಟೆ. ಮಹಾಕಾವ್ಯಗಳಲ್ಲಿ ನಾಟಕಗಳಲ್ಲಿ ಬರುವ ವ್ಯಕ್ತಿಗಳು ಕವಿಯ ಪ್ರತಿಭೆಯಿಂದ ಹೊರ ಹೊಮ್ಮಿದ ವ್ಯಕ್ತಿಗಳು. ರಾವಣ, ಕೀಚಕ, ದುರ್ಯೋಧನ, ಅಭಿಮನ್ಯು ಶ್ರೀರಾಮಚಂದ್ರ ಇವರನ್ನೆಲ್ಲ ಕಂಡವರಾರು? ಅವರಾಡಿದ ಮಾತು ಗಳನ್ನು ಕೇಳಿದವರಾರು? ಆದರೆ ಕವಿಗಳು ತಮಗೆ ದೊರಕಿದ ಮೂಲದಲ್ಲಿ ಚಿತ್ರಿತರಾದ ವ್ಯಕ್ತಿಗಳನ್ನು ಪರಿಚಯಮಾಡಿಕೊಂಡು ತಮಗೆ ತೋರಿದ ರೀತಿಯಲ್ಲಿ ಅವರನ್ನು ರೂಪುಗೊಳಿಸಿ, ತಮ್ಮ ಮನಸ್ಸಿನಲ್ಲಿ ಮೂಡುವ ಭಾವನೆಗಳನ್ನು ಅವರ ಮೂಲಕ ಹೇಳಿಸುವರಲ್ಲವೇ? ಈ ಅಂಶವನ್ನು ಗಮನಿಸಿದರೆ ಸಮಸ್ತ ಕವಿತೆಯೆಲ್ಲ ಭಾವಗೀತೆಯೆಂದರೆ ಅದು ಸಹಜ ವಾದದ್ದೇ. ಆದರೆ ಅನುಕೂಲ್ಯಕ್ಕಾಗಿ ನಾವು ಕವಿತೆಯನ್ನು ನಾನಾ ವಿಧವಾಗಿ ವಿಂಗಡಿಸುತ್ತೇವೆ. ಭಾವಗೀತೆಯಲ್ಲಿ ಆತ್ಮನಿವೇದನಕ್ಕೆ ಪ್ರಾಧಾನ್ಯ; ಮಿಕ್ಕವುಗಳಲ್ಲಿ ಕವಿ ತನ್ನ ಹೃದಯವನ್ನು ಇತರರ ಮೂಲಕ ಹೊರಗೆಡಹುತ್ತಾನೆ.

ಆತ್ಮನಿವೇದನ ಪ್ರಧಾನವಾದ ಭಾವಗೀತೆಯ ವಿಸ್ತಾರವೂ ವೈವಿ ಧ್ಯವೂ ಅನಂತ. ಅದು ಮಾನವನ ನಾನಾ ವಿಧವಾದ ಅನುಭವಗಳನ್ನು ಚಿತ್ರಿಸುತ್ತವೆ. ಭಕ್ತಿ, ದೇಶಪ್ರೇಮ, ಪ್ರೇಮದ ವಿವಿಧ ರೂಪಗಳು ಇವೇ ಮೊದಲಾದ ಮಾನವನ ಅನುಭವಗಳೇ ಭಾವಗೀತೆಯ ವಸ್ತು. ಆದರೆ ಭಾವಗೀತೆ ಉದಾತ್ತವಾದ ಭಾವವೊಂದನ್ನು ಪ್ರದರ್ಶಿಸಬೇಕು. ಭಾವ ಗೀತೆಯ ಭಾಷೆ ಸುಂದರವೂ, ಅದು ಚಿತ್ರಿಸುವ ಚಿತ್ರಗಳು ರಮ್ಯವೂ ಆಗಿರಬೇಕಲ್ಲದೆ, ವಸ್ತುವಿನ ಘನತೆಗೆ ತಕ್ಕಂತೆ ಅದರ ರೀತಿ ಬಂಧುರವೂ ಗಂಭೀರವೂ ಆಗಿರಬೇಕು. ಶುದ್ಧವಾದ ಭಾವಗೀತೆಯಲ್ಲಿ ಒಂದೇ ಒಂದು ಪ್ರಧಾನವಾದ ಭಾವ ಹರಿಯುತ್ತಿರುತ್ತದೆ. ಹೇಳುವ ರೀತಿ ಸಂಗ್ರಹವೂ ಸಾರವತ್ತಾಗಿಯೂ ಇರಬೇಕು. ಇಲ್ಲವಾದರೆ ಕಾವ್ಯ ಬಂಧದ ಬಿಗಿ ಕಡಿಮೆಯಾಗಿ, ಸ್ವಾರಸ್ಯರಹಿತವಾಗಿ ಕವಿತೆ ಮಂಕಾಗು ತ್ತದೆ. ಒಟ್ಟಿನಲ್ಲಿ ಈ ತೆರನಾದ ಕವಿತೆಯಲ್ಲಿ ಕವಿಯ ಮಾತಿನ ಪ್ರಾಮಾಣಿಕತೆಗೆ ಹೆಚ್ಚು ಬೆಲೆ.

ಭಾವಗೀತೆಯಲ್ಲಿ ಕವಿ ತನ್ನ ವ್ಯಕ್ತಿತ್ವವನ್ನು ಮೂಡಿಸುತ್ತಾನೆ. ಅವನ ಹೃದಯವೇ ಅವನ ಅನುಭವದ ಸಾರವೇ ಮಾತಿನ ಮೂಲಕ ಅದರಲ್ಲಿ ಹೊರ ಹೊಮ್ಮುತ್ತಿರುತ್ತದೆ. ಕವಿಯ ಧ್ಯಾನ, ಚಿಂತನ, ತಪಸ್ಸಿನ ಫಲ ಈ ಭಾವಗೀತೆ. ಆದರೆ ಪ್ರಪಂಚದ ಉತ್ತಮೋತ್ತಮವಾದ ಭಾವಗೀತೆಗಳಲ್ಲಿ ಕವಿಯ ವೈಯಕ್ತಿಕವಾದ ಅನುಭವಗಳೂ ಭಾವಗಳೂ ಮೂಡಿರುವುದಕ್ಕಿಂತ, ಕವಿ ತನ್ನ ಸುತ್ತಲ ಪ್ರಪಂಚದ ವ್ಯಕ್ತಿಗಳ ಅನುಭವವನ್ನು ಚಿತ್ರಿಸುತ್ತಿರುವನೆಂದರೆ ಹೆಚ್ಚು ಸಮಂಜಸವಾಗುವುದು. ತನ್ನ ಸುತ್ತಲ ಸಮಾಜದ ಸಾಮೂಹಿಕವಾದ ಅನುಭವವೇ ಕವಿಯ ಅನುಭವ; ಕವಿಯ ಅನುಭವವೇ ಅವನು ಬದುಕಿ ಬಾಳಿದ ಸಮಾಜದ ಅನುಭವ. ಕವಿಗಳು ವೈಯಕ್ತಿಕವಾದ ಭಾವಗಳನ್ನು ಮಾತಿನಲ್ಲಿ ಮೂಡಿಸುವ ಪ್ರಯತ್ನಕ್ಕಿಂತ, ತಾವು ಹುಟ್ಟಿ ಬೆಳೆದ ಸಮಾಜದ ಒಟ್ಟು ಭಾವಗಳನ್ನು ಮೂಡಿಸುವುದರಲ್ಲಿಯೇ ಕವಿತೆ ಮೊದಲು ಹುಟ್ಟಿತೆಂದು ಬಹುಜನ ಪಂಡಿತರ ಅಭಿಪ್ರಾಯ. ಆದರೆ ಕಾಲಕಳೆದಂತೆಲ್ಲ ಈ ಗೀತೆಗಳಲ್ಲಿ ಕವಿ ವೈಯಕ್ತಿಕವಾದ ಭಾವಗಳನ್ನು ನಿರೂಪಿಸುತ್ತ ಬಂದನೆಂಬುದು ಎಲ್ಲರಿಗೂ ತಿಳಿದ ಸಂಗತಿ.

ಭಕ್ತಿಗೀತೆಗಳು ಭಾವಗೀತೆಗಳ ಒಂದು ಭೇದ. ತತ್ವಗಳನ್ನು, ಚಿಂತಿಸಿ, ಮನನಮಾಡಿ ಕವಿ ಆ ಭಾವಗಳಿಗೆ ರೂಪುಕೊಡುವುದರಿಂದ್ದ ಇಲ್ಲಿ ಕವಿ ಮಾತಿನ ಮೂಲಕ ಮೂಡಿರುವ ಆಲೋಚನೆಗಳಿಗೆ ಹೆಚ್ಚು ಬೆಲೆ ಕೊಟ್ಟರೂ, ಕವಿ ಈ ಗೀತೆಗಳಲ್ಲಿ ಮೂಡಿಸಿರುವ ಚೆಲುವು, ಭಾವ ಬಂಧುರತೆ, ಉಪಯೋಗಿಸಿರುವ ಭಾಷೆಯ ಔಚಿತ್ಯ ಇವುಗಳಿಗೂ ಸಾಕಷ್ಟು ಗಮನಕೊಡಬೇಕು. ಹರಿಹರನ ಶತಕಗಳೂ, ಶಿವಶರಣರ ವಚನಗಳೂ, ಹರಿದಾಸರ ಕೀರ್ತನೆಗಳೂ ಈ ಗುಂಪಿಗೆ ಸೇರಿದವು. ಹೊಸಗನ್ನಡ ಸಾಹಿತ್ಯದಲ್ಲಿ ಈ ತೆರನಾದ ಕವನಗಳು ಹೇರಳವಾಗಿ ಬಂದಿವೆ. ಶ್ರೀಯವರ "ಕರುಣಾಳು ಬಾ ಬೆಳಕೆ" ಎಂಬ ಕವನವನ್ನು ಇಲ್ಲಿ ಉದಹರಿಸಬಹುದಾಗಿದೆ. ಉದಾತ್ತವಾದ ವಸ್ತು, ಭಾವ, ಶೈಲಿಯನ್ನೊಳಗೊಂಡದ್ದು ಪ್ರಗಾಥ (ಶ್ರೀಯವರ ಶ್ರೀ ಕೃಷ್ಣರಾಜೇಂದ್ರ ರಜತ ಮಹೋತ್ಸವದ ಪ್ರಗಾಥ) ಚರಮಗೀತೆ, ವರ್ಣನಾ ಕವಿತೆ, ಅನ್ಯೋಕ್ತಿ

ವಿಡಂಬನ, ಮುಕ್ತಕ, ಅಷ್ಟಷಟ್ಪದಿ ಇವೆಲ್ಲ ಭಾವಗೀತೆಯ ಪ್ರಭೇದಗಳು. ಇವುಗಳ ಲಕ್ಷಣಗಳನ್ನಾಗಲೀ, ಭಾವಗೀತೆ ಕವಿಯ ಹೃದಯದಿಂದ ಹೊರ ಹೊಮ್ಮುವ ರೀತಿ, ಕವಿಯ ಪ್ರತಿಭೆ ಬುದ್ಧಿ ಇವೇ ಮೊದಲಾದುವುಗಳಿಗಿರುವ ಪರಸ್ಪರ ಸಂಬಂಧ ಸ್ಥಾನ ಇವುಗಳನ್ನಾಗಲೀ ವಿಸ್ತಾರ ಭಯದಿಂದ ಇಲ್ಲಿ ಪ್ರಸ್ತಾಪಿಸಿಲ್ಲ.

### ೩. ಮುಕ್ತಕ [೯]

ಸಂಸ್ಕೃತಸಾಹಿತ್ಯದಲ್ಲಿ ಪ್ರಖ್ಯಾತವಾಗಿರುವ 'ಮುಕ್ತಕ'ವನ್ನು ಭಾವಗೀತೆಯೆಂದೇ ನಾವು ಪರಿಗಣಿಸಬಹುದು. ಸ್ವಯಂಪೂರ್ಣವಾದ ಬಿಡಿಪದ್ಯವನ್ನು ಮುಕ್ತಕವೆಂದು ಕರೆಯುತ್ತಾರೆ. ಇನ್ನೂ ಒಂದು ಹೆಜ್ಜೆ ಮುಂದಕ್ಕೆ ಹೋಗಿ ಮುಕ್ತಕವನ್ನು ಕಿರುಕಾವ್ಯವೆಂದು ಕರೆದರೂ ತಪ್ಪಾಗಲಾರದು. ಭಾವದ ಪ್ರೇರಣೆಯುಂಟಾದಾಗ ಕವಿ ಸಂದರ್ಭಕ್ಕೆ ತಕ್ಕಂತೆ ಈ ಬಿಡಿಪದ್ಯಗಳನ್ನು ರಚಿಸಬಹುದು. ಹಾಗಲ್ಲದೆ ಈಗ ಪ್ರಚಾರದಲ್ಲಿರುವ ಅನೇಕ ಮುಕ್ತಕಗಳು ಮಹಾಕಾವ್ಯಗಳ ಒಂದು

---

[೯] ದಂಡಿ ಮುಕ್ತಕವನ್ನು ಹೆಸರಿಸುತ್ತಾನೆ. ಮುಕ್ತಕಂ ಕುಲಕಂಕೋಷಃ ಇತ್ಯಾದಿ. ಕಾವ್ಯಾದರ್ಶ ೧-೧೩. ಅಗ್ನಿಪುರಾಣ ಅದರ ಲಕ್ಷಣವನ್ನು ಈ ರೀತಿ ತಿಳಿಸುತ್ತದೆ. 'ಮುಕ್ತಕಂ ಶ್ಲೋಕ ಏವೈಕಶ್ಚಮತ್ಕಾರಕ್ಷಮಃ ಸತಾಮ್' ೩೩೭-೩೬. ನಾಗವರ್ಮ (೨)ನು ತನ್ನ ಕಾವ್ಯಾವಲೋಕನದಲ್ಲಿ ಇದನ್ನು 'ಇಡುಕುಂಗಬ್ಬ' ವೆಂದು ಕರೆದಂತೆ ತೋರುತ್ತದೆ. 'ಇಡುಕುಂಗಬ್ಬಂ ಮುಕ್ತಕವೊಡಂಬಡಲ್ ನೆಗೞ್ತೆ' ಇತ್ಯಾದಿ. ಸೂತ್ರ ೨೪೨. ವಿಶ್ವನಾಥನು ಸಾಹಿತ್ಯದರ್ಪಣದಲ್ಲಿ ಈ ರೀತಿ ಹೇಳಿದ್ದಾನೆ. 'ಛಂದೋಬಂಧಪದಂ ಪದ್ಯಂ ತೇನಮುಕ್ತೇನ ಮುಕ್ತಕಂ' | ಮಾತ್ರಪದೇನ ದೃಶ್ಯವ್ಯವಚ್ಛೇದನಃ | ಛಂದೋಗಾಯತ್ರ್ಯಾದಿ ತಚ್ಚ ಛಂದಃ ಶಾಸ್ತ್ರಪ್ರಸಿದ್ಧ ಲಕ್ಷಣಮ್ | ತೇನ ಪದ್ಯೇನ ಮುಕ್ತೇನ ಪದ್ಯಾಂತರ ನಿರಪೇಕ್ಷೇಣ ಏಕೇನ | ತ್ರೈಸ್ಯೈಕೇನ ಚ ಮುಕ್ತಕಂ ಇತಿ ಕ್ವಚಿತ್ ಪಾಠಃ | ಕಾವ್ಯಮೀಮಾಂಸೆಯ ಕರ್ತೃವಾದ ರಾಜಶೇಖರನು ಮುಕ್ತಕವನ್ನು ಹೆಸರಿಸಿ ಶುದ್ಧ, ಚಿತ್ರ, ಕಥೋತ್ಥ, ಸಂವಿಧಾನಕಭೂ, ಆಖ್ಯಾನವಾನ್ ಎಂದು ಅದರಲ್ಲಿ ಐದು ಭೇದಗಳನ್ನು ಹೇಳಿದ್ದಾನೆ.

ಭಾಗವಾಗಿದ್ದು, ರಸಿಕರಿಗೊಂದು ಹಬ್ಬವೆನಿಸಲು ಬೇರೆಯಾಗಿ ನಿಂತು, ಸುಭಾಷಿತ ಗ್ರಂಥಗಳಲ್ಲಿ ಶಾಶ್ವತವಾದ ಸ್ಥಾನವನ್ನು ಪಡೆದಿವೆ. ಇವುಗಳನ್ನು ರಚಿಸಿದ ಸನ್ನಿವೇಶ ಏನೇ ಇರಲಿ ಮುಕ್ತಕಗಳ ರಮ್ಯತೆಗೆ ಯಾರು ತಾನೆ ಮರುಳಾಗುವುದಿಲ್ಲ? 'ಮುಕ್ತಕ' ಎಂಬ ಮಾತಿನಲ್ಲಿ ಮುತ್ತು ಎಂಬ ಅರ್ಥದ ಸೂಚನೆ ಇರುವಂತೆ ಕಾಣುತ್ತದೆ. ಮುತ್ತಿನ ಆಕಾರ ಕಿರಿದು; ಅದು ತುಂಬ ನಯವಾದದ್ದು; ಅದು ಕಾಂತಿಯಿಂದ ಕೂಡಿರುವುದಲ್ಲದೆ, ತನ್ನ ಕಾಂತಿಯಿಂದ ತನ್ನ ಸುತ್ತಲಪ್ರದೇಶವನ್ನು ಬೆಳಗುತ್ತದೆ. ಮೇಲಾಗಿ ಬಿಡಿಮುತ್ತುಗಳನ್ನು ಸರವಾಗಿ ಕಟ್ಟಿದರೂ ಅವುಗಳ ಕಾಂತಿ ಇಮ್ಮಡಿಸಿ, ಆ ಹಾರವನ್ನು ಧರಿಸಿದವರ ಚೆಲುವೂ ಮಿಗಿಲಾಗುತ್ತದೆ; ಮುಕ್ತಕಗಳ ರಸಾಸ್ವಾದನೆಯಿಂದ ರಸಿಕನ ಮನಸ್ಸು ಉಲ್ಲಾಸಗೊಳ್ಳುವಂತೆ. ಅಮರು ಶತಕದ ಪದ್ಯಗಳನ್ನು ಬಿಡಿಯಾಗಿ ಪರಿಶೀಲಿಸಿದರೂ ಸರಿಯೇ, ಒಟ್ಟಾಗಿ ಪರಿಭಾವಿಸಿದರೂ ಸರಿಯೇ ಈ ಅಂಶ ಸ್ಪಷ್ಟವಾಗುತ್ತದೆ.

ಇಷ್ಟರಮಟ್ಟಿಗೆ ಸಹೃದಯರ ಮನಸ್ಸನ್ನು ಸೆಳೆದಿರುವ ಈ ಮುಕ್ತಕಗಳ ಲಕ್ಷಣವನ್ನು ಸ್ಥೂಲವಾಗಿ ಹೀಗೆ ಸಂಗ್ರಹಿಸಬಹುದು. ಮೊದಲನೆಯದಾಗಿ ಈ ಬಿಡಿಪದ್ಯಗಳ ಆಕಾರ ತುಂಬಕಿರಿದು. ಕವಿ ಈ ಮುಕ್ತಕಗಳ ಸ್ವಯಂಪೂರ್ಣತೆಯ ಕಡೆಗೆ ತನ್ನ ಗಮನವನ್ನು ಕೊಡಬೇಕು. ಈ ಪದ್ಯಗಳ ಕರ್ತೃ ತನಗಿರುವ ಅಲ್ಪಾವಕಾಶದಲ್ಲಿ ಎಂದರೆ ನಾಲ್ಕು ಸಾಲುಗಳ ಪರಿಮಿತಿಯಲ್ಲಿ ಒಂದು ಸನ್ನಿವೇಶವನ್ನೋ, ಮುಖ್ಯವಾದ ಭಾವವನ್ನೋ, ಇಲ್ಲವೆ ಬೆಂದಬಾಳಿಗೆ ಬೆಳಕನ್ನು ಬೀರುವ ಮಹತ್ವಪೂರ್ಣವಾದ ಜೀವನಾನುಭವವನ್ನೋ ನಿರೂಪಿಸಬೇಕಾಗುತ್ತದೆ. ಎರಡನೆಯದಾಗಿ ವರ್ಣನೆಗಾಗಲೀ ವಿಷಯವಿಸ್ತಾರಕ್ಕಾಗಲೀ ಇಲ್ಲಿ ಹೆಚ್ಚು ಅವಕಾಶವಿಲ್ಲ. 'ಒಳ್ಳೊಳ್ಳೆ ಮಿಣಿ ಗರಿ ತೆಗೆದು ಆಡ್ಯಾವ ಗರತಿ ಗಂಗಮ್ಮನ ಉಡಿಯಾಗ' ಎಂಬಂತಹ ವರ್ಣನೆಗಳು ಬಂದರೆ ಅವು ಅಪರೂಪ. ಹೆಚ್ಚೇನು? ಕವಿ ಇಲ್ಲಿ ಒಂದು ಮಾತನ್ನೂ ಸಹ ವ್ಯರ್ಥಮಾಡುವ ಹಾಗಿಲ್ಲ. ಮೂರನೆಯದಾಗಿ ವಿಷಯ ನಿರೂಪಣೆಗಿಂತ ಸೂಚನೆಗೇ ಇಲ್ಲಿ ಹೆಚ್ಚು ಪ್ರಾಧಾನ್ಯ. ಮುಕ್ತಕಗಳ ವಿಷಯದಲ್ಲಿ ಸಹೃದಯನ

ಹೊಣೆಯೂ ಒಂದು ಉಂಟು. ಈ ಮುಕ್ತಕಗಳ ಸಂಪೂರ್ಣವಾದ ಸ್ವಾರಸ್ಯವನ್ನು ಅನುಭವಿಸಬೇಕಾದರೆ, ಸಹೃದಯನಾದವನು ಕವಿಯ ಕಲ್ಪನೆಯೊಂದಿಗೆ ತನ್ನ ಕಲ್ಪನೆಯ ರೆಕ್ಕೆಯನ್ನು ಹಾರಬಿಟ್ಟು ಅವುಗಳ ಸುತ್ತಲೂ ಒಂದು ಉಚಿತವಾದ ಆವರಣವನ್ನು ಕಲ್ಪಿಸಿಕೊಳ್ಳಬೇಕು. ಆಗ ಮಾತ್ರ ಮುಕ್ತಕಗಳ ಸ್ವಾರಸ್ಯ ಮನದಟ್ಟಾಗುತ್ತದೆ. ಈ ದಂತದ ಮೇಲೆ ಕೆತ್ತಿರುವ ಚಿತ್ರಗಳ ಸತ್ವ ಮನವರಿಕೆಯಾಗುತ್ತದೆ. ಉದಾಹರಣೆಯೊಂದರಿಂದ ಈ ಅಂಶವನ್ನು ಸ್ಫುಟಗೊಳಿಸಬಹುದು. ಗೋದಾವರೀ ನದಿಯ ತೀರದಲ್ಲಿದ್ದ ವನವೊಂದು ಧಾರ್ಮಿಕನೊಬ್ಬನ ಓಡಾಟದ ಸ್ಥಳವಾಗಿತ್ತು. ಅವನ ಸಂಚಾರ ತರುಣಿಯೊಬ್ಬಳ ಪ್ರಣಯಕ್ಕೆ, ವಿಹಾರಕ್ಕೆ ತುಂಬ ಭಂಗವನ್ನುಂಟುಮಾಡುತ್ತಿತ್ತು. ವೇದಾಭ್ಯಾಸದಿಂದ ಜಡನಾದ ಆ ಮುದಿಗೊಡ್ಡಿಗೆ ಯುವಕಯುವತಿಯರ ಪ್ರಣಯ ಪ್ರಸಂಗ ಹೇಗೆ ತಾನೆ ಅರ್ಥವಾದೀತು? ಆಕೆ ಆ ಧಾರ್ಮಿಕನಿಗೆ ಸನ್ನೆಮಾಡಿನೋಡಿದಳು; ಸೂಚನೆಕೊಟ್ಟಳು. ಅವೊಂದೂ ಅವನಿಗೆ ಅರ್ಥವಾಗಲಿಲ್ಲ. ಕೊನೆಗೆ ನಾಯಿಯಿಂದ ಅವನ ಸಂಚಾರಕ್ಕೆ ಅಡ್ಡಿಪಡಿಸಿದಳು. ಆದರೂ ಆ ಧಾರ್ಮಿಕನು ಹೋಗದಿರಲು, ಬೇಸತ್ತ ಆ ತರುಣಿ ಭಯಹುಟ್ಟಿಸುವ ಈ ವಾಕ್ಬಾಣವನ್ನು ಅವನ ಮೇಲೆ ಪ್ರಯೋಗಿಸಿದಳು.

ನಡೆದಾಡು **ಧಾರ್ಮಿಕನೆ** ನಿಶ್ಶಂಕೆಯಿಂದಿನ್ನು!
ಹತಮಾದುದಾ **ನೀಚ ಶುನಕ** ತಾನಿಂದು
ಗೋದಾವರೀನದಿಯ ತಡಿಯೆಡೆಯಲಿಡಿಕಿರಿದ
ಹೊದರೊಳಿಹ ದೃಪ್ತ **ಕೇಸರಿಯ** ಕೈಯಿಂದಕನ್ನಡ

**ಧ್ವನ್ಯಾಲೋಕ||**

ಧಾರ್ಮಿಕನ ಧರ್ಮಕಾರ್ಯಕ್ಕೆ ಅಡ್ಡಿತರುತ್ತಿದ್ದ "ನೀಚ ಶುನಕ" ವೇನೋ ಸಾವನ್ನಪ್ಪಿತು. ಯುವತಿಯ ಪ್ರಣಯಕಾರ್ಯಕ್ಕೆ ಅಡ್ಡಿ ತರುತ್ತಿದ್ದ ಧಾರ್ಮಿಕನಿಗೆ "ನೀಚ ಶುಕ" ನಿಗೆ ಬದಲಾಗಿ "ದೃಪ್ತ ಕೇಸರಿಯ" ಭಯ ಕಾಣಿಸಿಕೊಂಡಿತು. ಹೀಗಿರುವಲ್ಲಿ ಆ ಧಾರ್ಮಿಕನು ಇನ್ನು ನಿಶ್ಶಂಕೆಯಿಂದ ನಡೆದಾಡಲು ಸಾಧ್ಯವೇ? ಅವನು ಆ ಸ್ಥಳವನ್ನು ಬಿಟ್ಟು ಓಡಿ ಹೋಗಲು ಈ ಹೆದರಿಕೆ ಸಾಕಲ್ಲವೆ?

ಈ ಮುಕ್ತಕಗಳ ವಿಷಯ ಅನಂತ; ವೈವಿಧ್ಯ ವಿಪುಲ. ಪ್ರೇಮ

ಈ ಬಿಡಿ ಪದ್ಯಗಳ ಮುಖ್ಯ ವಿಷಯವೆಂಬುದನ್ನು ನಾವು ಗಮನಿಸಬೇಕು. ಹೀಗಿರುವುದು ಸಹಜವೂ ಹೌದು. ನಮ್ಮ ಜೀವನದ ಬಹುಭಾಗವನ್ನು ಪ್ರೇಮವೇ ಮುಸುಕಿದೆ. ಪ್ರೇಮದ ಪ್ರಪಂಚ ಹೂಬಿಸಿಲಿನ ಹೊಂಗನಸು ಗಳಿಂದ ಮೊದಲಾಗಿ, ಒಲಿದವರು ಕೂಡಿ ಬೇರೆಯಾಗುವವರೆಗೂ ಪ್ರಣ ಯಿಗಳ ಮನಸ್ಸಿನಲ್ಲಿ ಮೂಡುವ ನಾನಾ ಭಾವಗಳನ್ನೂ ಅವರ ಆಸೆ, ನಿರೀಕ್ಷೆ, ವಿರಹ, ಆಕಾಂಕ್ಷೆಗಳನ್ನೂ ಈ ಮುಕ್ತಕಗಳು ಶುಚಿಯಾದ ವಾಣಿಯಲ್ಲಿ ವಿಶ್ವಮೋಹಕವಾದ ರೀತಿಯಲ್ಲಿ ಚಿತ್ರಿಸುತ್ತವೆ. ಅಮರು ಶತಕವೇ ಈ ಹೇಳಿಕೆಗೆ ಸಾಕ್ಷಿ. ಮೇಲೆ ನಿರೂಪಿಸಿರುವ ಅಂಶವನ್ನು ಸ್ಪಷ್ಟಪಡಿಸಲು ಶಂತನು ಸತ್ಯವತಿಯ ಪ್ರಣಯವನ್ನು ಚಿತ್ರಿಸುವ ಪದ್ಯ ವೊಂದನ್ನು ಪಂಪಭಾರತ (೧-೭೦) ದಿಂದ ಎತ್ತಿಕೊಡಬಹುದು.

ಮೃಗಯಾ ವ್ಯಾಜದಿನೊರ್ಮೆ ಶಂತನು ತೊೞಲ್ತರ್ಪಂ ಪಳಂಚಲ್ಕೆ ತ
ನ್ಮೃಗ ಶಾಬಾಕ್ಷಿಯ ಕಂಪು ತಟ್ಟೆ ಮಧುಪಂಬೊಲ್ ಸೋಲ್ತು
ಕಂಡೊಲ್ದು ನ
ಲ್ಮೆಗೆ ದಿಬ್ಯಂಬಿಡಿವಂತೆವೋಲ್ ಪಿಡಿದು ನೀಂ ಬಾ ಪೋಪಮೆಂದಂಗೆ ಮೆ
ಲ್ಲಗೆ ತತ್ಕನ್ಯಕೆ ನಾಣ್ಚಿ ಬೇಡುವೊಡೆ ನೀವೆಮ್ಮಯ್ಯನಂ ಬೇಡಿರೇ

ಮುಕ್ತಕಗಳ ಇನ್ನೊಂದು ಪ್ರಧಾನ ವಿಷಯ ಅನ್ಯೋಕ್ತಿ. ಪಶು ಪಕ್ಷಿಗಳ ಮೂಲಕ ಮನುಷ್ಯನಲ್ಲಿರುವ ಹುಳುಕುಗಳನ್ನು ಬಯಲಿಗೆಳೆಯು ವುದೇ ಈ ಉಕ್ತಿಗಳ ಸ್ವಾರಸ್ಯ. ಕತ್ತೆ ಅದರ ಮೌಢ್ಯಕ್ಕೂ ಹೀನಬಾಳಿಗೂ ಹೆಸರಾದುದಲ್ಲವೇ? ಅದರ ಮೂಲಕ ಒಂದು ರಾಜ್ಯದ ಯಂತ್ರವನ್ನೇ ಟೀಕಿಸುವ ಈ ಅನ್ಯೋಕ್ತಿ ಎಷ್ಟು ಸ್ವಾರಸ್ಯವಾದುದು!

ರೇ ರೇ ರಾಸಭ ವಸ್ತ್ರಭಾರವಹನಾತ್ಕುಗ್ರಾಸಮಶ್ನಾಸಿ ಕಿಂ
ರಾಜಾಶ್ವಾವಸಥಂ ಪ್ರಯಾಹಿ ಚಣಕಾಭ್ಯೂಷಾನ್ಸುಖಂ ಭಕ್ಷಯ ॥
ಸರ್ವಾನ್ಪುಚ್ಛವತೋ ಹಯಾ ಇತಿ ವದಂತ್ಯತ್ರಾಧಿಕಾರೋ ಸ್ಥಿತಾ
ರಾಜಾತ್ಯೈರುಪದಿಷ್ಟಮೇವ ಮನುತೇ ಸತ್ಯಂ ತಟಸ್ಥಾಃ ಪರೇ ॥

ಎಲೆ ಎಲೆ ಕತ್ತೆ! ವಸ್ತ್ರಭಾರವನ್ನು ಹೊತ್ತು ಕೆಟ್ಟ ಕೂಳನ್ನೇಕೆ ತಿನ್ನುವೆ? ಅರಮನೆಯ ಲಾಯವನ್ನು ಹೊಕ್ಕು ಗುಗ್ಗುರಿಯನ್ನು ಸುಖ ವಾಗಿ ಮೆಲ್ಲು. ಬಾಲವಿರುವ ಪ್ರಾಣಿಗಳನ್ನೆಲ್ಲ ಕುದುರೆಗಳೆಂದು ಅಲ್ಲಿನ ಅಧಿಕಾರಿಗಳು ತಿಳಿಯುತ್ತಾರೆ. ರಾಜನೂ ಅವರ ಮಾತನ್ನು ಸತ್ಯ

ವೆಂದು ನಂಬುತ್ತಾನೆ. ತಮಗೇಕೆ ಇದರ ಚಿಂತೆಯೆಂದು ಮಿಕ್ಕವರು ತಟಸ್ಥರಾಗಿರುತ್ತಾರೆ.

ಸಂಸ್ಕೃತ ಸಾಹಿತ್ಯ ಸಾಗರದಲ್ಲಿ ಅಡಗಿರುವ ಇಂಥ ಮುಕ್ತಕಗಳು ಎಷ್ಟೋ! ಮೇಲಿನ ವಿವರಣೆಯಿಂದ ಇವುಗಳ ಸ್ವರೂಪ ತಕ್ಕಮಟ್ಟಿಗಾದರೂ ಸ್ಪಷ್ಟವಾಗಿರಬೇಕು. ಇನ್ನು ನಮ್ಮ ಮುಂದಿರುವ ಅಮರುಶತಕವನ್ನೇ ಪರಿಶೀಲಿಸಬಹುದು.

### ೪ ಅಮರುಶತಕದ ಅವಲೋಕನ

ಕಿರಿದಾದ ಅವಕಾಶದಲ್ಲಿ ಈ ಶತಕದ ಕೆಲವು ಪದ್ಯಗಳನ್ನು ಎತ್ತಿಕೊಂಡು ಅವುಗಳ ಸೊಗಸಿನ ವಿಚಾರವಾಗಿ ಒಂದೆರಡು ಮಾತುಗಳನ್ನು ಹೇಳಬಹುದೇ ಹೊರತು ಗ್ರಂಥದ ವಿಸ್ತಾರವಾದ ವಿಮರ್ಶೆಗೆ ಕೈಯಿಕ್ಕುವಂತಿಲ್ಲ. ಈ ಶತಕದ ಒಂದೊಂದು ಪದ್ಯವೂ ಒಂದೊಂದು ಪೂರ್ಣವಾದ ಪ್ರಪಂಚ. ವಿಪ್ರಲಂಭಶೃಂಗಾರವನ್ನೇ ಕವಿ ಈ ಪದ್ಯಗಳಲ್ಲಿ ವಿಶೇಷವಾಗಿ ಪ್ರತಿಪಾದಿಸಿದ್ದಾನೆ. ಒಲಿದವರುಗಳ ವಿರಹ ಆಶೆ ಆಕಾಂಕ್ಷೆಗಳು, ಕೋಪ, ಮಾನಿನಿಯರನ್ನು ಒಲಿಸಿಕೊಳ್ಳುವಿಕೆ, ಸಂತೋಷ ಇವೇ ಮೊದಲಾದ ನಾನಾಭಾವಗಳನ್ನು ಕವಿ ಈ ಪದ್ಯಗಳಲ್ಲಿ ಪ್ರದರ್ಶಿಸಿರುವನಾದರೂ ಪ್ರೇಮಪ್ರಪಂಚಕ್ಕೆ ಸಂಬಂಧಿಸಿದ ಗಾಢವಾದ ಆಳವಾದ ಸಮಸ್ಯೆಗಳನ್ನಾಗಲೀ, ಮನಸ್ಸನ್ನು ಪ್ರಕ್ಷುಬ್ಧಗೊಳಿಸುವ ಭಾವಗಳನ್ನಾಗಲೀ ಇಲ್ಲಿ ನಿರೂಪಿಸಿಲ್ಲ. ಒಲಿದವರ ವಿಷಯದಲ್ಲಿ ಮಾನಿನಿಯರಿಗೆ ಕೋಪವುಂಟಾದರೂ ಅದು ಬಹುಬೇಗ ಕರಗಿ, ಕಣ್ಣೀರಾಗಿ ಸಂತೋಷದ ಹೊನಲಾಗಿ ಹರಿಯುತ್ತದೆ. ಸಾಮಾನ್ಯವಾಗಿ ಕವಿಗಳು ಹೆಂಗಸರನ್ನು ಚಂಚಲೆಯರೆಂದೂ ಅವರ ಒಲವು ಅಸ್ಥಿರವೆಂದೂ ಚಿತ್ರಿಸುವುದುಂಟು. ಆದರೆ ಈ ನಮ್ಮ ಕವಿ ಹೆಂಗಸರ ವಿಷಯದಲ್ಲಿ ತುಂಬ ಸಹಾನುಭೂತಿಯನ್ನು ತೋರಿಸುತ್ತಾನೆ. ಪುರುಷರೇ ಇಲ್ಲಿ ಅಪರಾಧಿಗಳು. ಹೆಣ್ಣಿನ ವಿಷಯದಲ್ಲಿ ಈ ರೀತಿಯ ಸಹಾನುಭೂತಿಯನ್ನು ಕವಿಗಳು ತೋರಿರುವುದು ಅಪೂರ್ವ.

ಪ್ರೇಮ ಪ್ರಪಂಚಕ್ಕೆ ಕಾಲಿಡುತ್ತಲೇ ಪ್ರಣಯಿಗಳಿಗೆ ಈ ಲೋಕವೇ ಹೊಸದಾಗಿ ತೋರುವುದಂತೆ! ಒಲಿದವನಿಗೆ ತನ್ನ ಪ್ರಿಯತಮೆಯನ್ನು ಕಂಡು ಕೂಡಿ ನಲಿಯುವುದು ಹಾಗಿರಲಿ, ಅವಳ ಮನೆಯ ಬೀದಿಯಲ್ಲಿ

ಸುಳಿಯುವುದೇ ಸಂತಸವನ್ನುಂಟುಮಾಡುವುದಂತೆ! ಆ ಭಾವವನ್ನು ಕವಿ ಹೀಗೆ ವರ್ಣಿಸುತ್ತಾನೆ !

ಕಣ್ಣ ನೋಟದ ಬೇಟದಿಂದೀ ಮನವು ಉಬ್ಬಿರೆ
ಕೆಳೆಯ ಬೆಳೆಯಿಸುವಂಥ ಬಗೆಯನು ನೆನೆದಿರೆ
ದೂತಿಕಾ ಸಂಚಾರ ಗೋಚರವಾಗುತಿರೆಯಿರೆ
ಒಲುಮೆಯಿಂಪಿನಲಂಪು ಸೊಂಪನು ತಳೆದಿರೆ
ದೂರವಿರಲಾ ದಯಿತೆಯನು ನಾ ಸೆಳೆದು ಭರದಿಂ
ದಪ್ಪಿಕೊಳ್ಳುವ ಸೊಗದ ಸವಿ ಸಂಮೋದವು!
ಮನೆಯ ಬಳಿಯಾ ಹಾದಿಯಲೆ ಸುಳಿಸುಳಿವುದೂ ಸಹ
ಇಂದು ನನ್ನೀ ಹೃದಯಕೆನಿತಾನಂದವು ! ೬

ಮನೆಗೆ ಬಂದು ಸಂಸಾರಹೂಡಲಿರುವ ಹೊಸಹೆಣ್ಣು ಲಜ್ಜೆಯ ಮುದ್ದೆ. ' ಪ್ರಿಯನು ಬಲಾತ್ಕಾರದಿಂದ ಸೀರೆಯನ್ನು ಹಿಡಿದೆಳೆಯಲು, ಹೊಸದಾಗಿ ಮನೆಗೆ ಬಂದ ಹೆಣ್ಣು ನಾಚಿ ಮುಖ ತಗ್ಗಿಸುವಳು. ನಲ್ಲನು ಬಲಾತ್ಕಾರವಾಗಿ ಅವಳನ್ನು ಅಪ್ಪಬಯಸಿದಾಗ, ಅದಕ್ಕೆ ಅಡ್ಡಿಬರುವಂತೆ ತನ್ನ ಅವಯವಗಳನ್ನು ಬೇರೆ ಕಡೆ ತಿರುಗಿಸುವಳು. ಪ್ರಿಯನ ಪ್ರಶ್ನೆಗಳಿಗೆ ಉತ್ತರಕೊಡಲು ಧೈರ್ಯಸಾಲದಿರುವಾಗ ನಗುಮುಖದಿಂದ ಗೆಳತಿಯ ಕಡೆಗೆ ಕಣ್ಣುತಿರುಗಿಸುವಳು. ಹೀಗೆ ಹೊಸದಾಗಿ ಮನೆಗೆ ಬಂದ ಹೆಣ್ಣು ಪ್ರಿಯನು ಮಾಡುವ ಮೊದಲಬಾರಿಯ ಹಾಸ್ಯದಲ್ಲಿ, ಮನಸ್ಸಿನಲ್ಲಿಯೇ ನಾಚಿಕೆಯಿಂದ ಪ್ರಿಯನನ್ನು ತಣಿಸಲು ಅಸಮರ್ಥಳಾಗಿ ಬಳಲುತ್ತಾಳೆ.'

ಮೊಗವ ತಗ್ಗಿಪಳೊಗೆದ ವಿನಯದೊಳಿನಿಯ ಹಿಡಿಯಲು ಸೆರಗನು
ಹಟದೊಳಪ್ಪುಗೆಗೆಳಸಲಿವಳಿರವೆಳೆದುಕೊಳುವಳು ಮೈಯನು.
ಶಕ್ಯಳಲ್ಲೆಂದೆನಲು ನಗುಮೊಗದವರ ಸಖಿಯರ ನೋಡುತ
ಪ್ರಥಮ ಪರಿಹಾಸದೊಳು ನವವಧುವಿಹಳು ನಾಚೊಳು ಬಾಡುತ. ೧೦

ಏಕಾಂತದಲ್ಲಿ ತನ್ನ ಇನಿಯನನ್ನು ಕಂಡ ಇನಿಯಳಿಗೆ ಪ್ರೇಮ ಮತ್ತು ನಾಚಿಕೆಗಳೊಡನೆ ಸ್ಪರ್ಧೆಯುಂಟಾಯಿತು. ಈ ಸ್ಪರ್ಧೆಯ ಪರಿಣಾಮವನ್ನು ಚಿತ್ರಿಸಿರುವ ಪದ್ಯ ತುಂಬ ಸುಂದರವಾಗಿದೆ--

ಶಯನಮಂದಿರ ಶೂನ್ಯವಾದುದನರಿದು ಮೆಲ್ಲನೆ ಹಾಸನಿರದೇಳುತೆ
ಸೋಗುನಿದ್ದೆಯೊಳಿದ್ದ ನಲ್ಲನ ಮುದ್ದುಮೊಗವನು ಬಾಲೆ ನೀಡುಂ
ನೋಡುತೆ
ಶಂಕೆಯಿಲ್ಲದೆ ಮುತ್ತನೊತ್ತಿರಲೊಗೆದ ಗಂಡಸ್ಥಳದ ಪುಳಕವ ಕಾಣುತೆ
ಬಾಲೆ ನಾಚುತೆ ಮೊಗವ ತಗ್ಗಿಸಲಿನಿಯ ನೀಡುಂ ಮುದ್ದಿಸಿದ ನಗುತೆ.೯೦

ಮನೆಗೆ ಬಂದ ಇನಿಯನಿಗೆ ಪ್ರಿಯೆ ಎಸಗುವ ಸ್ವಾಗತವನ್ನು ಕವಿ ಈ ರೀತಿ ವರ್ಣಿಸುತ್ತಾನೆ. ಆ ಪದ್ಯ ತುಂಬ ಚೆಲುವಾಗಿದೆ—

ನೀಳಮಾಲೆಯ ನೋಟದೊಳೆ ತಾನೆಸಗಿ ಮಣಿದಳು ತರದೆ ನೈದಿಲೆಯ
ಬೊಗಸೆಹೂವಿನ ಸೇಸೆದಳಿದಳು ಮೊಳೆವ ನಗೆಯೊಳು ತರದೆ ಮಲ್ಲಿಗೆಯ
ಬೆವರು ಸುರಿಯುವ ಮೊಲೆಗಳಿಂದವಳರ್ಘ್ಯವಿತ್ತಳು ತರದೆ ಬಿಂದಿಗೆಯ
ತನ್ನ ಅಂಗಗಳಿಂದ ಮಂಗಳಗೈದಳಿಂತವಳೊಳವೊಗಲು ತನ್ನೆರೆಯ ೮೬

ಪ್ರಥಮ ಸಮಾಗಮದಲ್ಲಿ ನವವಧುವು ತುಂಬ ನಾಚಿಕೆಯಿಂದ ತನ್ನ ಇನಿಯನೊಡನೆ ಮಾತನಾಡಲಿಲ್ಲ. ಅವನ ಕತ್ತನ್ನು ಬಿಗಿಯಾಗಿ ಅಪ್ಪಿ ಕೊಳ್ಳಲಿಲ್ಲ. ಆದರೆ ಕಾರ್ಯ ಮಿಂಚಿಹೋದಮೇಲೆ ಆಕೆಗೆ ತುಂಬ ಪಶ್ಚಾತ್ತಾಪವುಂಟಾಗುತ್ತದೆ. ಆ ಪಶ್ಚಾತ್ತಾಪದ ಚಿತ್ರ ಇದು—

'ಮೂಢಳಾದ ನಾನು ಪ್ರಿಯತಮನ ಕತ್ತನ್ನೇಕೆ ಅಪ್ಪಿಕೊಳ್ಳಲಿಲ್ಲ? ನಲ್ಲನು ಮುತ್ತಿಡಲು ಯತ್ನಿಸಿದಾಗ ಮುಖವನ್ನೇಕೆ ಅತ್ತಕಡೆ ತಿರುಗಿಸಿದೆ? ಕಣ್ತುಂಬ ಇನಿಯನನ್ನು ನೋಡಲಿಲ್ಲವಲ್ಲ! ಯಾವ ಕಾರಣಕ್ಕಾಗಿ ನಾನು ಅವನೊಡನೆ ಮಾತನಾಡಲಿಲ್ಲ?' ಹೀಗೆಂದುಕೊಳ್ಳುತ್ತ ಪ್ರಿಯತಮನ ಪ್ರಥಮಸಮಾಗಮದ ಸನ್ನಿವೇಶವನ್ನು ಚಿಂತಿಸುತ್ತ, ಪ್ರೇಮದ ಸವಿಯನ್ನು ಸವಿದ ತರುಣಿ ಪಶ್ಚಾತ್ತಾಪವನ್ನು ಹೊಂದುವಳು. ೧೧

ಪ್ರಣಯಪ್ರಸಂಗದಲ್ಲಿ ಕೋಪಪ್ರದರ್ಶನಕ್ಕೆ ಹಿರಿದಾದ ಸ್ಥಾನವುಂಟು. ತಮ್ಮ ಇನಿಯರು ಅಪರಾಧಿಗಳಾದಾಗ ಮಾನಿನಿಯರು ಅವರಲ್ಲಿ ತಮ್ಮ ಮುನಿಸನ್ನು ನಾನಾ ವಿಧವಾಗಿ ಪ್ರದರ್ಶಿಸಿ ಸೇಡನ್ನು ತೀರಿಸಿ ಕೊಳ್ಳುವರು. ಅಪರಾಧಿಯಾದ ಪ್ರಿಯತಮನಲ್ಲಿ ಗೌರವವನ್ನು ತೋರಿಸಿ ಮಾನಿನಿಯೊರ್ವಳು ತನ್ನ ಮುನಿಸನ್ನು ತೀರಿಸಿಕೊಂಡ ರೀತಿ ಇದು—

'ತನ್ನ ಪ್ರಿಯನು ಬರುವುದನ್ನು ಕಂಡು ಅವನಿಗೆ ಸ್ವಾಗತವನ್ನು

ಬಯಸುವಂತೆ ಮೇಲಕ್ಕೆದ್ದು ಅವನು ತನ್ನೊಡನೆ ಒಂದೇ ಪೀಠದಲ್ಲಿ ಕುಳಿತುಕೊಳ್ಳುವುದನ್ನು ನಿವಾರಿಸಿದಳು. ತಾನೇ ಅವನಿಗೆ ತಾಂಬೂಲ ವನ್ನು ತಂದುಕೊಡುವ ನೆವದಲ್ಲಿ ಆಲಿಂಗನಕ್ಕೆ ಅಡ್ಡಿಪಡಿಸಿದಳು. ತನ್ನ ಇನಿಯನಿಗೆ ಉಪಚರಿಸುವಂತೆ ಸೇವಕರನ್ನು ನಿಯಮಿಸುವ ನೆವದಿಂದ ಅವನೊಡನೆ ಮಾತನಾಡಲಿಲ್ಲ. ಈ ರೀತಿಯಾಗಿ ಜಾಣೆಯಾದ ತರುಣಿ ಗಂಡನನ್ನು ಉಪಚರಿಸುವ ನೆವದಿಂದ ತನ್ನ ಇನಿಯನ ಮೇಲೆ ತನಗಿದ್ದ ಕೋಪವನ್ನು ಸಾರ್ಥಕಪಡಿಸಿಕೊಂಡಳು.' ೧೯

ಪ್ರಣಯಕೋಪವನ್ನು ಪ್ರದರ್ಶಿಸಿ ತನ್ನ ಬಾಹುಬಂಧನದಲ್ಲಿ ಇನಿಯನನ್ನು ಅಪ್ಪಿಕೊಂಡು ಶಿಕ್ಷಿಸುವ ಪುಣ್ಯವನ್ನು ಪಡೆಯುವವನು ನಿಜವಾಗಿಯೂ ಧನ್ಯನಲ್ಲವೇ ?

ಮುಳಿದ ದಯಿತೆ ತೊನೆವ ಬಳ್ಳಿದೋಳ ಪಾಶದಿಂದಲೆಳೆದು ಬಿಗಿದು ಕಟ್ಟುತೆ
ಸಂಜೆಹೊತ್ತು ಸಖಿಯರೆದುರು ಕಾಂತನನ್ನುಮನೆಯೊಳಕ್ಕೆ ಎಳೆಯುತೊಯ್ಯುತೆ
ಮತ್ತೆ ಇಂತೆ ಎಂದು ಜಾರುತಿರುವ ಮೆಲುನುಡಿಯೊಳು ತೋರೆ ದುಶ್ಚರಿತೆಯನು
ಅಳುತ ನಲ್ಲೆ ಹೊಡೆದೊಡಿಲ್ಲವೆಂದು ನಗುತ ಮಾಜುವಿನಿಯನವನೆ ಧನ್ಯನು!೧೪

ಆದರೆ ಪುರುಷರ ಮನಸ್ಸನ್ನು ಕಂಡವರಾರು ? ಒಮ್ಮೆ ನಲ್ಲನು ಇನಿಯಳ ಮನಸ್ಸನ್ನು ಅನುಸರಿಸುತ್ತಿದ್ದನು. 'ನೀರು ಕುಡಿತೀಯಾ ಬಸವಣ್ಣ' 'ಹುಲ್ಲು ತಿನ್ನುತೀಯಾ ಬಸವಣ್ಣ' ಎಂದರೆ ಮರುಮಾತ ನಾಡದೆ ಹೂಗುಟ್ಟುತ್ತಿದ್ದ ಈ **ಗೂಳಿಬಸವ** ಈಗ ಅನ್ಯನಂತಾಗಿರುವ ನೆಂದು ತರುಣಿಯೊಬ್ಬಳು ವ್ಯಥೆಪಡುತ್ತಾಳೆ.

"ಕಪ್ಪಿದಲ್ಲವೆ ?" "ಕಪ್ಪು" "ಪ್ರಿಯತಮ, ಬಿಳುಪಿದಲ್ಲವೆ ?" "ಅಲ್ಲದಿನ್ನೇನು !"
"ನಡೆವ ಮುಂದಕೆ" "ಓಹೊ ನಡೆಯುವ" "ಸಾಕು ನಡೆದುದು ನಾಥ!" "ಸರಿ
ಸಾಕು."
ಅವನಿಂತನುಸರಿಸುತ್ತಿದ್ದನು ಮೊದಲು ಬಹು ದಿನವೆನ್ನ ಮನವಿದನು
ಆವನೆ ಹೆರರಂತಾದನೆಲೆ ಸಖಿ ಎಂತು ಪುರುಷರೊಳು ಕೆಳೆ ತಾನು! ೬೮

ಮೊದಲು ಸವಿದ ಸುಖದ ದಿನಗಳನ್ನು ನೆನೆದು, ಈಗಿನ ಇನಿಯನ ವಿಪರೀತ ವರ್ತನೆಯನ್ನು ಕಂಡು ಹೃದಯ ನೂರು ಸೀಳಾಗ ದೇಕೋ ದೇವರೇ ಬಲ್ಲ !

ಒಲುಮೆ ಬಿಗಿದಿಹ ಕಟ್ಟುಕಳಚಲು ಪ್ರೀತಿ ಗೌರವವಿಳಿಯಲು
ನೇರ್ಪು ತೊಲಗಲು ಜನರು ನಡೆದಂತವನು ನನ್ನೊಳು ನಡೆಯಲು
ಇದನು ಪ್ರಿಯಸಖಿ! ಊಹಿಸೂಹಿಸಿ ಕಳೆದ ದಿನಗಳ ನೆನೆಯುತ
ಸೀಳದೇತಕೊ ಅರಿಯೆನೆದೆಯಿದು ನೂರು ತೆರೆದೊಳು ಬಿರಿಯುತೆ ೬೯

ಮಾನಿನಿಯರ ಪ್ರಣಯಕೋಪದ ಪ್ರದರ್ಶನಕ್ಕೆ ಅವರ ಸಖಿಯರ ಪ್ರೋತ್ಸಾಹವೂ ಒಂದು ಪ್ರಬಲವಾದ ಕಾರಣ. ಮುಗ್ಧೆಯೊಬ್ಬಳನ್ನು ಅವಳ ಸಖಿಯರು ತನ್ನ ಪ್ರಿಯನಲ್ಲಿ ಹುಸಿಮುನಿಸನ್ನು ತೋರಿಸೆಂದು ಪ್ರೋತ್ಸಾಹಿಸಲು, ಆಕೆ ಸಖಿಯರಿಗೆ ಕೊಟ್ಟ ಉತ್ತರ ಪ್ರೇಮತುಂಬಿದ ಆ ಮುಗ್ಧೆಯ ಪುಟ್ಟ ಹೃದಯವನ್ನು ಚೆನ್ನಾಗಿ ಪ್ರತಿಬಿಂಬಿಸುತ್ತದೆ—

'ಮುಗ್ಧೆ ಮುಗ್ಧತೆಯಿಂದಲೇ ನೀ ಕಾಲವೆಲ್ಲವನಿಂತು ಕಳೆಯುತಲಿರುವೆಯ
ಹೂಡು ಕೆಚ್ಚನು ತೋರು ಮುನಿಸನು ದೂರವಿರಿಸೌ ನಲ್ಲನೊಳು ನೀ ಋಜುತೆಯ
ಇಂತು ಸಖಿ ಸಂಚೋದಿಸುತ್ತಿರಲಾಕೆ ಬೆದರಿದ ಮೊಗದೆ ಮರುನುಡಿ ನುಡಿದಳು
ಮೆಲ್ಲನುಸಿರೌ ಕೇಳಿಸೀತೀ ನನ್ನ ಹೃದಯದೊಳಿರುವ ನಲ್ಲನಿಗೆಂದಳು ೧೨

ಒಮ್ಮೊಮ್ಮೆ ವಿನೋದಕ್ಕಾಗಿ ನಟಿಸಿದ ಪ್ರಣಯಕೋಪವೂ ವಿಪರೀತ ಫಲವನ್ನುಂಟುಮಾಡಬಹುದು. ಆದರೂ ನಾಚಿಕೆಯಿಲ್ಲದ ಹಾಳು ಮನಸ್ಸು ಮತ್ತೆ ಇನಿಯನನ್ನೇ ಯೋಚಿಸುತ್ತದೆ.

'ಎಲೆ ಗೆಳತಿ, ತುಂಬ ಪ್ರಯಾಸದಿಂದ ವಿನೋದಕ್ಕಾಗಿ ಸುಳ್ಳು ಹುಡುಗಾಟಕ್ಕಾಗಿ ಕೋಪವನ್ನು ನಟಿಸಿ ಹೊರಟು ಹೋಗೆಂದು ನಾನು ಹೇಳಲು, ಕಲ್ಲೆದೆಯ ನನ್ನ ನಲ್ಲನು ಹಾಸಿಗೆಯನ್ನು ಬಿಟ್ಟು ಹೊರಟೇ ಹೋದನು. ಹೀಗಿರಲು ಪ್ರೇಮವನ್ನು ಹುಡಿಗುಟ್ಟುವ ಕರುಣೆಯನ್ನು ತೊರೆದಿರುವ ಇನಿಯನಲ್ಲಿ ಹಾಳು ನಾಚಿಕೆಯಿಲ್ಲದ ಮನಸ್ಸು ಮತ್ತೆ ಆಸೆಗೊಳ್ಳುತ್ತದೆ. ನಾನು ಏನು ತಾನೆ ಮಾಡಲಿ? ೨೦

ಪ್ರೇಮದ ಪ್ರಪಂಚ ಸುಗಮವಾಗಿರಬಹುದು. ಇನಿಯನು ತನ್ನ ಪ್ರಿಯತಮೆಯ ವಿಷಯದಲ್ಲಿ ದಾಸನಂತೆ ನಡೆದುಕೊಳ್ಳುತ್ತಿರಬಹುದು. ಆದರೆ ತರುಣಿಯರು ತಮ್ಮ ಇನಿಯನ ವಿಷಯದಲ್ಲಿ ಅವಿವೇಕದಿಂದ ವರ್ತಿಸಿದರೆ ಪುರುಷರ ಪ್ರೇಮವನ್ನು ಕಳೆದುಕೊಳ್ಳಬಹುದು. ಹಾಗಾಗ ಕೂಡದೆಂದು ವೃದ್ಧೆಯೊಬ್ಬಳು ತರುಣಿಯೊಬ್ಬಳಿಗೆ ಬುದ್ಧಿ ಹೇಳುತ್ತಾಳೆ—

'ಈ ಊರಿನಲ್ಲಿ ಮನೆಮನೆಗಳಲ್ಲಿಯೂ ಯುವತಿಯರು ಇರುವರಷ್ಟೆ. ನೀನೀಗ ಹೋಗಿ ಅವರನ್ನು ಕೇಳು. ಅವರ ಇನಿಯರು ನಿನ್ನ ಇನಿಯನಂತೆ ತಮ್ಮ ಪ್ರಿಯತಮೆಯರಿಗೆ ನಮಸ್ಕರಿಸುವರೇನು. ? 'ನಿನ್ನ ಪ್ರಿಯತಮನಾದರೋ ನಿನ್ನ ದಾಸನಂತೆ ನಡೆದುಕೊಳ್ಳುತ್ತಿದ್ದಾನೆ. ಆದ್ದರಿಂದ ಎಲೆ ಆತ್ಮದ್ರೋಹಿಣಿಯೇ, ಕುಜನರ ಚಾಡಿಮಾತುಗಳಿಗೆ ಕಿವಿಗೊಡಬೇಡ. ಒಮ್ಮೆ ಪುರುಷರ ಪ್ರೇಮ ವಿಮುಖವಾದರೆ ಅದನ್ನು ಹಿಂದಿರುಗಿಸುವುದು ಕಷ್ಟಸಾಧ್ಯವಾಗುತ್ತದೆ. ೧೮

ಹೀಗೆಯೇ ಉದಾಹರಣೆಗಳನ್ನು ಬೆಳೆಸಬಹುದು. ಆದರೆ ಅದಕ್ಕೆ ಕೊನೆಮೊದಲೆಲ್ಲಿ ? ಆದರೂ ಈ ಅವಲೋಕನವನ್ನು ಮುಗಿಸುವ ಮುಂಚೆ ಇನ್ನೆರಡು ಅಂಶಗಳನ್ನು ವಾಚಕರ ಗಮನಕ್ಕೆ ತರಬೇಕು. ಅಮರುಶತಕ ಒಂದು ಚಿತ್ರಶಾಲೆ. ಕವಿ ವರ್ಣಿಸಿರುವ ಚಿತ್ರಗಳು ಸ್ವಾಭಾವಿಕವಾಗಿದ್ದು, ವರ್ಣಿಸಿರುವ ಚಿತ್ರ ಕಣ್ಣಿಗೆ ಕಟ್ಟಿದಂತಾಗುತ್ತದೆ. ಹೆಣ್ಣಿನ ಕಣ್ಣಿನ ನೋಟದ ಚಿತ್ರ ಎಷ್ಟು ರಮ್ಯವಾಗಿದೆ ನೋಡಿ–

ದೂರಾದುತ್ಸುಕಮಾಗತೇ ವಿವಲಿತಂ ಸಂಭಾಷಿಣಿ ಸ್ಫಾರಿತಂ
ಸಂಶ್ಲಿಷ್ಯತ್ಯರುಣಂ ಗೃಹೀತವಸನೇ ಕೋಪಾಂಚಿತ ಭ್ರೂಲತಮ್
ಮಾನಿನ್ಯಾಶ್ಚರಣಾನತವ್ಯತಿಕರೇ ಬಾಷ್ಪಾಂಬು ಪೂರ್ಣೇಕ್ಷಣಂ
ಚಕ್ಷುರ್ಜಾತಮಹೋ ಪ್ರಪಂಚಚತುರಂ ಜಾತಾಗಸಿ ಪ್ರೇಯಸಿ ೫೫

ತನ್ನಲ್ಲಿ ಅಪರಾಧಮಾಡಿದ ಪ್ರಿಯನ ವಿಷಯದಲ್ಲಿ ತರುಣಿಯ ಕಣ್ಣು, ದೂರದಲ್ಲಿ ಅವಳ ನಲ್ಲನಿರುವಾಗ ಕುತೂಹಲದಿಂದ ಕೂಡಿರುವುದು. ಅವನು ಹತ್ತಿರಕ್ಕೆ ಬರಲು ವಕ್ರವಾಗಿ ಬೇರೆಯ ಕಡೆ ತಿರುಗುವುದು. ಪ್ರಿಯನು ನುಡಿಸಿದಾಗ ಅರಳುವುದು. ಅವನು ಅವಳನ್ನು ಅಪ್ಪಲು ಕೆಂಪಾಗುವುದು. ನಲ್ಲನು ಪ್ರಿಯತಮೆಯ ಸೀರೆಯ ಸೆರಗನ್ನು ಹಿಡಿಯಲು, ಕೋಪದಿಂದ ಹುಬ್ಬು ಕೊಂಕಾಗುವುದು. ಪ್ರಿಯನು ನಲ್ಲೆಯ ಕಾಲಿಗೆ ಬೀಳಲು ಹೋದಾಗ ಕಣ್ಣೀರಿನಿಂದ ತುಂಬುವುದು. ಅಹೋ, ಲೋಕದಲ್ಲಿ ಹೆಣ್ಣಿನ ನೋಟ ಆಶ್ಚರ್ಯಕರವಾದುದು !

ಒಂದೇ ಕಾಲದಲ್ಲಿ ತನ್ನಿಬ್ಬರು ಪ್ರಿಯತಮೆಯರಲ್ಲಿ ಪ್ರೇಮವನ್ನು ತೋರಿಸಿದ ಧೂರ್ತನೊಬ್ಬನ ಚಿತ್ರವಿದು. ಧೂರ್ತನೊಬ್ಬನು ತನ್ನಿಬ್ಬರು

ಪ್ರಿಯತಮೆಯರು ಒಂದೇ ಆಸನದಲ್ಲಿ ಕುಳಿತಿದ್ದುದನ್ನು ನೋಡಿದನು. ಹಿಂಭಾಗದಿಂದ ಬಂದು ಪ್ರೀತಿಯಿಂದ ಒಬ್ಬಳ (ಇವಳು ಹಿರಿಯವಳೇ ಇರಬಹುದಲ್ಲವೇ ?) ಎರಡು ಕಣ್ಣುಗಳನ್ನೂ ಮುಚ್ಚಿದನು. ಆಗ ಅವನ ಮೈ ಪುಳುಕಿತವಾಯಿತು. ಆ ಬಳಿಕ ದಿಟ್ಟನಾದ ಅವನು ಇನ್ನೂ ಸ್ವಲ್ಪ ಬಾಗಿದನು. ಇನ್ನೊಬ್ಬಳ ಮನಸ್ಸು ಹರ್ಷದಿಂದ ಅರಳುತ್ತಿತ್ತು. ಮನಸ್ಸಿನ ಹರುಷವನ್ನು ವಿಶಾಲವಾದ ಅವಳ ಕಪೋಲ ಫಲಕ ಪ್ರತಿಬಿಂಬಿಸುತ್ತಿತ್ತು. ಆ ರೀತಿಯಲ್ಲಿ ಮಂದಹಾಸದಿಂದ ಸುಂದರವಾಗಿ ನಗುತ್ತಿದ್ದ ಅವಳ ವಿಶಾಲವಾದ ಕೆನ್ನೆಯನ್ನು ಅವನು ಮುತ್ತಿಟ್ಟನು.

ಒಂದೆ ಹಾಸಿನೊಳಿನಿಯಳಿಬ್ಬರು ಕುಳಿತುದನು ಕಾಣುತ್ತ ಹಿಂಬದಿಯಿಂದ ಲೈತಂದು
ಒಲಿದು ಒಬ್ಬಳನಾಟವಾಡುವ ಸೋಗುನೆವದೊಳು ಮುಚ್ಚುತೊಡನಂದು
ಕೊರಳ ನಸುಕೊಂಕಿಸುತ ಪೊಂಪುಳಿವೋದ ಧೂರ್ತನು ಒಲುಮೆ ದಳ ವೇರಿರುವ ಬಗೆಯಿಂದ
ತಾನೆ ತನ್ನೊಳಗೊಳಗೆ ನಗುತಿರಲೆಸೆದ ಕೆನ್ನೆಯ ಬೇರೆಯೊಬ್ಬಳನೆಳೆದು ಮುದ್ದಿಸಿದ. ೨೫

ಅನೇಕ ಪದ್ಯಗಳಲ್ಲಿ ಕವಿ ಸಂಭಾಷಣೆಯ ಮೂಲಕ ಗಾಢವಾದ ಪ್ರೇಮವನ್ನೋ, ವಿರಹವೇದನೆಯನ್ನೋ ಇಲ್ಲವೆ ಇತರ ಇನ್ನಾವ ಭಾವವನ್ನೋ ಪ್ರದರ್ಶಿಸಿ ತನ್ನ ವೈಶಿಷ್ಟ್ಯವನ್ನು ಬೆಳಗುತ್ತಾನೆ. ಚೆಲುವೆಯೊಬ್ಬಳು ದಟ್ಟವಾಗಿ ಹಬ್ಬಿದ ಇರುಳಿನಲ್ಲಿ ಏಕಾಂಗಿಯಾಗಿ ತನ್ನ ಪ್ರಿಯನನ್ನು ಅರಸುತ್ತ ಹೊರಟಾಗ ವೃದ್ಧೆಯೊಬ್ಬಳು ಆಕೆಯನ್ನು ಕುರಿತು ಪ್ರಶ್ನಿಸುತ್ತಾಳೆ. ಆ ಅಭಿಸಾರಿಕೆಯ ಪ್ರೇಮ, ಮಾತಿನ ಜಾಣ್ಮೆ ಈ ಸಂಭಾಷಣೆಯಲ್ಲಿ ಹೇಗೆ ಪ್ರಕಟವಾಗಿದೆ ನೋಡಿ—

'ಹೊರಟಿರುವೆ ಕರಭೋರು ಘನ ನಿಶೆಯೊಳೆತ್ತ ?'
'ನನ್ನ ಪ್ರಾಣಾಧಿಕನು ನಲ್ಲನಿರುವತ್ತ.'
'ಬೆದರಿಯೆಲೆ ಬಾಲೆಯಂತೇಕಾಕಿ ನೀನು'
'ಗರಿಯಂಬಿನೀ ಮದನ ಜೊತೆಗಿಲ್ಲವೇನು ?' ೭

ಇನಿಯನ ಪ್ರೇಮ ಇಳಿಮುಖವಾದಾಗ, ಪ್ರಣಯಿಗಳಿಗೆ ಮಾತು

ನಡೆದಾಗ, ಪ್ರಿಯೆ ತನ್ನ ನಲ್ಲನಿಗೆ ಕೊಡುವ ಉತ್ತರಗಳು ಎಷ್ಟು ಮರ್ಮ ಭೇದಕವಾಗಿವೆ ! ಹಾಗೂ ಸಂಭಾಷಣೆ ಎಷ್ಟು ಬಿಗಿಯಾಗಿದೆ ನೋಡಿ—

'ಬಾಲೆ!' 'ನಾಥನೆ !' 'ಕೋಪವನು ಮಾನಿನಿಯೆ, ಬಿಡು.' 'ನಾ ರೋಷ
ದಿಂದೇಗೈದುದು ?'

'ಖೇದವೆಸಗಿದೆ ನಮಗೆ' 'ನಿನ್ನಿಂದಿಲ್ಲ ತಪ್ಪೆನಗೆಲ್ಲ ತಪ್ಪೂ ನನ್ನದು !'

'ಅದರೇತಕೆ ಮತ್ತೆ ಗದ್ಗದ ದನಿಯೊಳಳುತಿಹೆ ?' 'ಆರಮುಂದಿಂದ
ತ್ತುದು ? '

'ಅಲ್ಲವೇನೆನ್ನೆದುರು' 'ನಿನಗಾನಾರು ?' 'ಕಾದಲೆ' 'ಅಲ್ಲವೆಂದೇ
ಅತ್ತುದು.' ೪೪

ಸಮಗ್ರ ಗ್ರಂಥವೇ ವಾಚಕರ ಎದುರುಗಿರುವುದರಿಂದ ಈ ಅವಲೋಕನವನ್ನು ಇಲ್ಲಿಗೇ ನಿಲ್ಲಿಸಬಹುದೆಂದು ತೋರುತ್ತದೆ.

## ೫ ಅಮರು ಶತಕದ ವ್ಯಾಖ್ಯಾನಗಳು

ಕನ್ನಡ ಸಾಹಿತ್ಯದ ಪ್ರೌಢಕಾವ್ಯಗಳನ್ನು ಸುಲಭವಾಗಿ ಅರ್ಥ ಮಾಡಿಕೊಳ್ಳಲು ಇಲ್ಲದ ಸೌಲಭ್ಯ, ಸಂಸ್ಕೃತಸಾಹಿತ್ಯದ ಯಾವ ಕೆಳ ಮಟ್ಟದ ಕಾವ್ಯಕ್ಕೂ ಇದೆಯೆಂದ ಮೇಲೆ ರಸಿಕಜನಾಹ್ಲಾದಿಯಾದ ಅಮರು ಶತಕವನ್ನು ಕುರಿತು ಈ ವಿಷಯದಲ್ಲಿ ಹೇಳಬೇಕಾದ್ದೇನಿದೆ ? ಈ ಶತಕಕ್ಕೆ ಹಲವಾರು ಪ್ರೌಢವ್ಯಾಖ್ಯಾನಗಳುಂಟು. ಕಾಲದ ದೃಷ್ಟಿಯಿಂದಲೂ ಯೋಗ್ಯತೆಯ ದೃಷ್ಟಿಯಿಂದಲೂ ಅರ್ಜುನವರ್ಮದೇವನಿಂದ ರಚಿತವಾದ 'ರಸಿಕ ಸಂಜಿವನೀ' ವ್ಯಾಖ್ಯಾನಕ್ಕೇ ಅಗ್ರತಾಂಬೂಲ ಸಲ್ಲಬೇಕು. ಇಲ್ಲಿ ಅನುಸರಿಸಿರುವುದು ಈ ವ್ಯಾಖ್ಯಾನವನ್ನೇ. ಅರ್ಜುನವರ್ಮದೇವನು ಪ್ರಸಿದ್ಧನಾದ ಮಾಳವ ದೇಶಾಧಿಪತಿಯಾದ ಭೋಜನ ವಂಶಕ್ಕೆ ಸೇರಿದವನು. ಇವನ ತಂದೆ ಸುಭಟವರ್ಮನೆಂದು ಈ ಟೀಕೆಯ ಆರಂಭದ ಶ್ಲೋಕಗಳಿಂದ ತಿಳಿದು ಬರುತ್ತದೆ. ಅರ್ಜುನ ವರ್ಮನ ಗುರು ಮದನೋಪಾಧ್ಯಾಯ. ಈ ವ್ಯಾಖ್ಯಾನವನ್ನು ಕ್ರಿ. ಶ ೧೨೧೫–೧೨೧೮ರ ಅಂತರದಲ್ಲಿ ಬರೆದಿರಬಹುದು. ಈ ವ್ಯಾಖ್ಯಾನವಲ್ಲದೆ ವೇಮಭೂಪಾಲನ ಶೃಂಗಾರ ದೀಪಿಕಾ, ರುದ್ರಮದೇವ ಮತ್ತು ರವಿ ಚಂದ್ರನ ವ್ಯಾಖ್ಯಾನಗಳು, ಸೂರ್ಯದಾಸನ ಶೃಂಗಾರತರಂಗಿಣೀ, ಶೇಷ

ರಾಮಕೃಷ್ಣರ 'ರಸಿಕ ಸಂಜೀವನೀ' ಈ ವ್ಯಾಖ್ಯಾನಗಳೂ ದೊರೆತಿವೆ. 'ಭಾವಚಿಂತಾಮಣಿ' ಎಂಬ ವ್ಯಾಖ್ಯಾನವನ್ನು ಬರೆದವನು ಚತುರ್ಭುಜ ಮಿಶ್ರ. ಕೋಕಸಂಭವ, ನಂದಲಾಲ, ರಾಮರುದ್ರ, ಶಂಕರಾಚಾರ್ಯ, ಹರಿಹರಭಟ್ಟ, ಮತ್ತು ಜ್ಞಾನಾನಂದ ಕಲಾಧರಸೇನರ ಟೀಕೆಗಳೂ ಇವೆ. ರವಿಚಂದ್ರನೂ ಜ್ಞಾನಾನಂದ ಕಲಾಧರಸೇನನೂ ಈ ಶತಕಕ್ಕೆ ಶೃಂಗಾರ ಶಾಂತರಸಗಳ ಪರವಾಗಿ ಅರ್ಥಬರೆದಿರುವರಂತೆ! ವಿಷಯ ಏನೇ ಇರಲಿ ಇಷ್ಟೊಂದು ವ್ಯಾಖ್ಯಾನಗಳು ಈ ಶತಕದ ಮೇಲೆ ಹುಟ್ಟಿರುವುದನ್ನು ನೋಡಿದರೆ ಇದು ಸಹೃದಯರಿಗೆ ಎಷ್ಟು ಪ್ರಿಯವಾಗಿದೆಯೆಂಬುದು ಸ್ಪಷ್ಟವಾಗುತ್ತದೆ.[10]

## ೬ ಪ್ರಶಸ್ತಿ

ಅಮರು ಕವಿ ತನ್ನ ಈ ಶೃಂಗಾರ ಶತಕವನ್ನು ರಚಿಸಿ ಸಾವಿರಕ್ಕೆ ಮೇಲ್ಪಟ್ಟು ವರುಷಗಳು ಉರುಳಿ ಹೋಗಿವೆ. ಆದರೂ ಈ ಕಾವ್ಯದ ಪ್ರಶಸ್ತಿಗೆ ಯಾವ ಕುಂದೂ ಕಂಡುಬಂದಿಲ್ಲ. ಕವಿಯನ್ನೂ ಕವಿಯ ಕೃತಿಯನ್ನೂ ನಮ್ಮ ಹಿರಿಯರು ತುಂಬ ಗೌರವಿಸಿದ್ದಾರೆ. ಅಮರು ಕವಿಯ ಒಂದು ಶ್ಲೋಕ ನೂರು ಪ್ರಬಂಧಕ್ಕೆ ಸಮಾನವೆಂಬ[11] ಸೂಕ್ತಿಯೊಂದು ಸಂಸ್ಕೃತ ಸಾಹಿತ್ಯದಲ್ಲಿ ಈ ಕಾವ್ಯಕ್ಕಿರುವ ಹಿರಿಮೆ ಪ್ರಶಸ್ತಿಗಳೇನೆಂಬುದನ್ನು ಸಾರುತ್ತದೆ. ಆಲಂಕಾರಿಕರಲ್ಲಿ ಸಾರ್ವಭೌಮನೂ ಧ್ವನಿಪ್ರಸ್ಥಾನದ ಆದ್ಯಪ್ರವರ್ತಕನೂ ಆದ ಆನಂದವರ್ಧನನು "ಅಮರುಕ ಕವಿಯ ಮುಕ್ತಕಗಳು ಶೃಂಗಾರ ರಸವನ್ನು ಸ್ರವಿಸುತ್ತ ಪ್ರಬಂಧಗಳಂತಿರುವುದು ಸುಪ್ರಸಿದ್ಧವಾಗಿಯೇ ಇದೆ."[12] ಎಂದು ಕವಿ ಕಾವ್ಯವನ್ನು ಮುಕ್ತಕಂಠದಿಂದ ಹೊಗಳಿದ್ದಾನೆ. ವಾಮನ, ರಾಜಶೇಖರ, ಧನಂಜಯ, ಮಮ್ಮಟ

---

[10] ಅಮರುಶತಕದ ಸಂಸ್ಕೃತ ಉಪೋದ್ಘಾತ A History of Sanskrit Literature (Classical Period)Vol, iii ಎಂಬ ಗ್ರಂಥದಿಂದಲೂ ಇಲ್ಲಿನ ವಿಷಯುವನ್ನು ಸಂಗ್ರಹಿಸಿದೆ.

[11] 'ಅಮರುಕಕವೇರೇಕಃ ಶ್ಲೋಕಃ ಪ್ರಬಂಧಶತಾಯತೇ'

[12] ಕನ್ನಡ ಧ್ವನ್ಯಾಲೋಕ. ಪುಟ ೯೦

ಮುಂತಾದ ಆಲಂಕಾರಿಕರು ಅಮರುಶತಕದ ಪದ್ಯಗಳನ್ನು ತಮ್ಮ ಗ್ರಂಥ ಗಳಲ್ಲಿ ಉದಹರಿಸಿ ಕವಿಯನ್ನು ಗೌರವಿಸಿದ್ದಾರೆ. ಅಮರುವನ್ನು ಉದ ಹರಿಸದ ಸುಭಾಷಿತಕಾರವಿಲ್ಲ. ಅಭಿನಯಕ್ಕೆ ಯೋಗ್ಯವಾಗಿರುವ ಈ ಪದ್ಯಗಳು ನಾಟ್ಯಶಾಸ್ತ್ರಾಭ್ಯಾಸಿಗಳಿಗೂ ನಾಟ್ಯಪ್ರದರ್ಶಕರಿಗೂ ತುಂಬ ಪ್ರಿಯವಾಗಿರುವುವಂತೆ! ಹೆಚ್ಚೇನು? ಅಮರು ಶತಕ ರಸದೊರತೆ; ಅಮರು ಕವಿ ರಸಕವಿ. ಕವಿಯ ಈ ವಿಧವಾದ ಪ್ರಶಸ್ತಿಗೆ ಕಾರಣವಾದರೂ ಏನು? ವಿದ್ವಾಂಸರು ಕವಿಯ ಕೃತಿಯನ್ನು ಬಗೆ ಬಗೆಯಾಗಿ ವಿಮರ್ಶೆ ಮಾಡಿ ಅದಕ್ಕೆ ಬೆಲೆ ಕಟ್ಟಿದ್ದಾರೆ. ವಿಶ್ವಮೋಹಕವಾದ ಶೃಂಗಾರರಸವೇ ಈ ಮುಕ್ತಕಗಳ ವಸ್ತುವಾಗಿರುವ ಕಾರಣ ಇವುಗಳ ಸೊಗಸಿಗೆ ಮರುಳಾಗದ ವರಾರು? ಅಷ್ಟೇ ಅಲ್ಲ; ಮುಕ್ತಕಗಳ ಗೊತ್ತಾದ ಪರಿಮಿತಿಯಲ್ಲಿ ಶೃಂಗಾರ ರಸಕ್ಕೆ ಸಂಬಂಧಿಸಿದ ಭಾವವೊಂದನ್ನು ಕವಿ ಕಲಾಪೂರ್ಣ ವಾಗಿ ಹೆಣೆದಿರುವುದು ಇವುಗಳ ಸೊಗಸಿಗೆ ಮತ್ತೊಂದು ಕಾರಣ. ವಿಪ್ರಲಂಭ ಶೃಂಗಾರವನ್ನು ಕವಿ ಚೆನ್ನಾಗಿ ಚಿತ್ರಿಸಬಲ್ಲನು. ಆಶೆ, ಅದರ ಪ್ರಾಪ್ತಿ, ನಿರಾಸೆ, ವಿರಹ, ಸಮಾಗಮ, ಸಂತೋಷ, ಕೋಪ, ಶೋಕ ಇವೇ ಮೊದಲಾದ ನಾನಾ ಭಾವಗಳನ್ನು ಚಿತ್ರಿಸುವುದರಲ್ಲಿ ಇವನ ಸಮಕ್ಕೆ ಬರತಕ್ಕ ಕವಿಗಳು ಸಂಸ್ಕೃತ ಸಾಹಿತ್ಯದಲ್ಲಿ ಹಲವರಿಲ್ಲ ವೆಂದರೆ ಅದು ಅತಿಶಯೋಕ್ತಿಯೆನಿಸಲಾರದು. ಅಮರು ಚಿತ್ರಿಸಿರುವ ಚಿತ್ರಗಳು ಪರಿಮಿತಿಯುಳ್ಳವಾದರೂ ಅವು ಸುಂದರವಾಗಿವೆ. ಈಗಾ ಗಲೇ ಇವಕ್ಕೆ ಉದಾಹರಣೆಯನ್ನು ಕೊಟ್ಟಿದೆ. ಮೇಲಾಗಿ ಅಮರು ಕವಿಯ ಶೈಲಿ ವೈದರ್ಭೀರೀತಿಯದಾಗಿದ್ದು, ಶೃಂಗಾರರಸದ ಪ್ರತಿಪಾದನೆಗೆ ತಕ್ಕುದಾಗಿದೆ. ಮೃದುವಾದ ಪದಗಳ ಜೋಡಣೆ, ದೀರ್ಘವಾದ ಸಮಾಸಗಳು ಹೆಚ್ಚಾಗಿಲ್ಲದಿರುವುದು, ಪೂರ್ಣ ಮಾಡತಕ್ಕ ಪದಗಳ ಅಭಾವ ಇವು ಈ ಪದ್ಯಗಳ ವೈಶಿಷ್ಟ್ಯ. ಮೂಲ ಶ್ಲೋಕಗಳನ್ನು ಮೇಲಿಂದ ಮೇಲೆ ಓದಿದರೇ ಕವಿ ಉಪಯೋಗಿಸಿರುವ ಪದಗಳ ನಾದ ಮಾಧುರ್ಯ ನಮಗೆ ಅರ್ಥವಾದೀತೇ ಹೊರತು, ಅದನ್ನು ಬೇರೆ ಭಾಷೆ ಯಲ್ಲಿ ಬೇರೆ ಮಾತಿನಲ್ಲಿ ಹೇಳುವುದೆಂದರೆ ಧಾರ್ಷ್ಟ್ಯವಾದೀತು. ವಿಷಯ ಪ್ರತಿಪಾದನೆಗೆ ಉಚಿತವಾದ ಛಂದಸ್ಸಿನ ಜೋಡಣೆಯೂ ಇಲ್ಲಿ ಗಮನಾ

ರ್ಹವಾದುದೇ. ಕವಿಗೆ ತುಂಬ ಇಷ್ಟವಾದ ಶಾರ್ದೂಲವಿಕ್ರೀಡಿತ ವೃತ್ತವನ್ನಲ್ಲದೆ ಸ್ರಗ್ಧರೆ, ವಸಂತತಿಲಕ, ಮಾಲಿನಿ, ಹರಿಣಿ, ಶಿಖರಿಣಿ, ಮಂದಾಕ್ರಾಂತ, ಅನುಷ್ಟುಬ್ ಇವೇ ಮೊದಲಾದ ಬಗೆ ಬಗೆಯ ವೃತ್ತಗಳನ್ನು ಕವಿ ಬಳಸಿದ್ದಾನೆ. ಅವುಗಳ ರಚನೆ ಮನಮೋಹಕವಾಗಿದೆ.

ವಿಶ್ವಮೋಹಕವಾದ ಶೃಂಗಾರರಸದ ಪ್ರತಿಪಾದನೆ, ಆ ರಸಕ್ಕೆ ಸಂಬಂಧಿಸಿದ ನಾನಾ ಭಾವಗಳ ಸೂಕ್ಷ್ಮವಾದ ಪ್ರದರ್ಶನ ಮತ್ತು ಚಿತ್ರಗಳ ಕಲ್ಪನೆ ಹಾಗೂ ರಚನೆ, ವೈದರ್ಭೀ ರೀತಿಯಲ್ಲಿ ಈ ಮುಕ್ತಕಗಳನ್ನು ಹೆಣೆದಿರುವುದು, ವಿಷಯ ನಿರೂಪಣೆಗೆ ಯೋಗ್ಯವಾದ ಬಗೆ ಬಗೆಯ ವೃತ್ತಗಳ ಆಯ್ಕೆ ಇವೇ ಮೊದಲಾದ ಅಂಶಗಳು ಈ ಶತಕದ ಪ್ರಶಸ್ತಿಗೆ ಕಾರಣಗಳೆಂದು ಧಾರಾಳವಾಗಿ ಹೇಳಬಹುದು. ಶೃಂಗಾರರಸವನ್ನು ಮನೋಹರವಾಗಿ ಚಿತ್ರಿಸಿರುವ ವಿಶ್ವಕವಿಗಳ ಸಾಲಿನಲ್ಲಿ ಅಮರು ಕವಿಯ ಸ್ಥಾನ ಸುಭದ್ರವಾಗಿದೆ.

## ೭ ಅಮರು ಶತಕದ ಕನ್ನಡದ ಅನುವಾದಗಳು

ಅಮರುಕವಿಯ ಈ 'ಪ್ರಣಯಗೀತೆಗಳ ಶತಕ' ರಚಿತವಾಗಿ ಸಾವಿರಕ್ಕೆ ಮೇಲ್ಪಟ್ಟು ವರ್ಷಗಳು ಉರುಳಿ ಹೋಗಿದ್ದರೂ ಇಂದಿನ ವರೆಗೂ ನಮ್ಮ ನಾಡಿನ ಕವಿಗಳಿಗೆ, ಆಲಂಕಾರಿಕರಿಗೆ, ರಸಿಕರಿಗೆ ಮೆಚ್ಚಿಗೆಯಾಗಿ ಅವರ ಪ್ರೇಮಾದರಗಳನ್ನು ಸಂಪಾದಿಸಿಕೊಂಡಿದೆ. ವ್ಯಾಖ್ಯಾನಕಾರರು ಈ ಮುಕ್ತಕಗಳ ಬಹುವಿಧವಾದ ಸ್ವಾರಸ್ಯವನ್ನು ಸಹೃಯರಿಗೆ ವಿವರಿಸಿದ್ದಾರೆ. ಅನೇಕ ಪಾಶ್ಚಾತ್ಯ ಭಾಷೆಗಳಿಗೆ ಈ ಗೀತೆಗಳ ಗುಚ್ಛ ಅನುವಾದಗೊಂಡಿದೆ. ರಸಸ್ಯಂದಿಯಾದ ಈ ಗೀತೆಗಳ ಸ್ವಾರಸ್ಯವನ್ನು ಮೂಲವನ್ನು ಓದಿ ಅರ್ಥಮಾಡಿಕೊಳ್ಳಲಾಗದ ನಮ್ಮ ಜನರಿಗೆ ಕವಿಹೃದಯವನ್ನು ಗ್ರಹಿಸಿದ ಕವಿಗಳು ತಮ್ಮ ನುಡಿಯಲ್ಲಿ ಅನುವಾದಗಳ ಮೂಲಕ ಇದರ ಪರಿಚಯ ಮಾಡಿಕೊಟ್ಟಿರಬೇಕೆಂದು ತೋರುತ್ತದೆ. ಭರತಖಂಡದ ಮಿಕ್ಕ ಭಾಷೆಗಳ ವಿಷಯವನ್ನು ನಾನರಿಯೆ. ಕನ್ನಡ ನುಡಿಯಲ್ಲಿ ಮಾತ್ರ ಈ ಶತಕದ ಅನುವಾದ ಕಾರ್ಯ ಆಗಾಗ ನಡೆದಿದೆ. ಸು. ೧೪೧೦ ರಲ್ಲಿದ್ದ ವಿಜಯನಗರದ ಅರಸುಮನೆತನಕ್ಕೆ

ಸೇರಿದ ದೇಪರಾಜನು ಈ ಶತಕವನ್ನು ಪರಿವರ್ಧಿನಿಷಟ್ಪದಿಯಲ್ಲಿ ಕನ್ನಡಿಸಿದ್ದಾನೆ. ಕವಿ ತನ್ನ ಗ್ರಂಥದ ಉತ್ಕೃಷ್ಟತೆಯನ್ನು ಕುರಿತು ಈ ಪದ್ಯದಲ್ಲಿ ಹೇಳಿಕೊಂಡಿದ್ದಾನೆ.

ಸ್ಮರರಾಜ್ಯದ ವೈಸಿರಿ ಶೃಂಗಾರದ | ಶರನಿಧಿ ರತಿ ನಾಟ್ಯದ ರಂಗಸ್ಥಳ|
ವಿರಹದ ನೆಲೆವೀಡೋಪರ ಕೂರಾಟದ ಕೊಸರಿನ ಗೊತ್ತು ||
ಸರಸರ ಸಂತವಣೆಯು ಮನೆ ಸುಗ್ಗಿಯು | ಪೊರೆವಾಗರ
ಭಾವಾಲಯವಪ್ಪಂ |
ತಿರೆ ಪೇಳಿದನಮರುಕವನು ದೇಪಮಹೀಪತಿ ಕನ್ನಡಿಸಿ ||

ಈ ಗ್ರಂಥ ಇನ್ನೂ ಅಚ್ಚಿನ ಬೆಳಕನ್ನು ಕಂಡಿಲ್ಲ. ಹಿತವಾದ ಮಿತವಾದ ಕನ್ನಡ ಸಂಸ್ಕೃತ ಪದಗಳನ್ನು ಹಾಸುಹೊಕ್ಕಾಗಿ ಸೇರಿಸಿ ರಚಿಸಿರುವ ಈ ಶತಕದ ಬಂಧ ಸರಸವಾಗಿದೆಯೆನ್ನಲು ಅಡ್ಡಿಯಿಲ್ಲ. ಕವಿಚರಿತ್ರೆಯಲ್ಲಿ ಕೊಟ್ಟಿರುವ ಉದಾಹರಣೆಗಳಿಂದ ಈ ಅಂಶ ಸ್ಪಷ್ಟವಾಗುತ್ತದೆ. ಕವಿಯ ಬಂಧವನ್ನೂ ಅನುವಾದದ ಸೊಗಸನ್ನೂ ತಿಳಿಯಲು ಕವಿಚರಿತ್ರೆಯಿಂದ ಇಲ್ಲಿ ಒಂದು ಪದ್ಯವನ್ನು ಎತ್ತಿಕೊಟ್ಟಿದೆ.

ಇರುಳೋಪರ ಮೃದುತಲ್ಪದೊಳೊಲಿದು | ಚ್ಚರಿಸುವ
ಕಾಮುಕಲಾಲಾಪವ ಮನೆ|
ಯರಗಿಳಿ ಕೇಳ್ದದನಿರದೆ ಪಿರಿಯರೊಳುದಯದೊಳುಸುರುತಿರೆ ||
ದರಹಸಿತಾನನೆ ಲಜ್ಜಿಸಿ ಕರ್ಣಾ | ಭರಣದ ಮಾಣಿಕ್ಯವ ದಾಳಿಂಬದ |
ಪರಳೆಂದೀವ ನೆವದಿ ನಿಲಿಸಿದಳಾ ಕೀರನ ಬಲ್ಸರವ ||

ಚಿಕ್ಕದೇವರಾಜ ಒಡೆಯರ ಆಸ್ಥಾನಕವಿಯಾದ ಚಿಕುಪಾಧ್ಯಾಯನು (೧೬೭೨) ಈ ಗ್ರಂಥವನ್ನು ಕನ್ನಡಿಸಿದಂತೆ ತೋರುತ್ತದೆ. ಆದರೆ ಆ ಗ್ರಂಥವೂ ಇನ್ನೂ ಅಚ್ಚಿನ ಬೆಳಕನ್ನು ಕಂಡಿಲ್ಲ.

ಮುಮ್ಮಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ ಅನೇಕ ಸಂಸ್ಕೃತ ಗ್ರಂಥಗಳು ಕನ್ನಡಕ್ಕೆ ಇಳಿದು ಬಂದವು. ಮಹಾರಾಜರೇ ಈ ಅನುವಾದ ಕಾರ್ಯನಡೆಸಿ ಇತರರಿಗೆ ಮೇಲ್ಪಂಕ್ತಿಯಾದರು. 'ವಾಣೀವಿಲಾಸ ಭಾರತ'ವೇ ಇದಕ್ಕೆ ಉದಾಹರಣೆ. ಅಷ್ಟೇ ಅಲ್ಲ; ಆ ಕಾಲದಲ್ಲಿ ಅನೇಕ ಸಂಸ್ಕೃತ ಗ್ರಂಥಗಳಿಗೆ ಕನ್ನಡದಲ್ಲಿ ಟೀಕೆಗಳು ರಚಿತವಾದವು. ದೊರೆಯ

ಆಶ್ರಿತನಾದ ವೆಂಕಟರಾಮಶಾಸ್ತ್ರಿಯು 'ನವ್ಯ ಕರ್ಣಾಟ ಭಾಷಾ ಪ್ರಕಟಿತ ಶೃಂಗಾರ ದೀಪಿಕಾ ಸರ್ವಸಂಗ್ರಹ 'ಎಂಬ ಹೆಸರಿನಿಂದ ಈ ಗ್ರಂಥಕ್ಕೆ ಟೀಕೆಯನ್ನು ಬರೆದಿದ್ದಾನೆ (೧೮೪೨). ಮೂಲದ ಸೊಗಸನ್ನು ಕನ್ನಡಿಗರಿಗೆ ಗದ್ಯದಲ್ಲಿ ತಿಳಿಸಲು ಮಾಡಿದ ಪ್ರಯತ್ನ ಇದು ಎಂದು ತೋರುತ್ತದೆ.

ಇಪ್ಪತ್ತನೆಯ ಶತಮಾನದಲ್ಲಿ ಇಂಗ್ಲಿಷ್ ಸಾಹಿತ್ಯ ಕನ್ನಡ ಸಾಹಿತ್ಯ ರಚನೆಗೆ ಸ್ಫೂರ್ತಿಯನ್ನೂ, ಕಾವ್ಯರಚನಾ ಸಾಮಗ್ರಿಯನ್ನು ಒದಗಿಸಿತೆಂಬುದು ಎಲ್ಲರಿಗೂ ತಿಳಿದ ವಿಷಯವೇ ಆಗಿದೆ. ಈ ಹೊಸಪ್ರಭಾವದಿಂದ 'ಉದಾರ ಚರಿತಾನಾಂ ತು ವಸುಧೈವ ಕುಟುಂಬಕಂ' 'ವಿಶ್ವಭಾರತಿ ಶರಣು ಕಿರು ತೀರ್ಥಮಲ್ತು' ಎಂಬ ಉದಾರವೂ ಉದಾತ್ತವೂ ಆದ ಭಾವನೆಗಳು ಕನ್ನಡಿಗರಲ್ಲಿ ಬೆಳೆದು ಬಲಿತವು. ಈ ಸಂದರ್ಭದಲ್ಲಿ ಸಂಸ್ಕೃತಸಾಹಿತ್ಯದಿಂದ ಕನ್ನಡಭಾಷೆಗೆ ಉಪಕಾರವಾಗಬೇಕಾಗಿರುವ ಅಂಶವನ್ನು ಮನಗಂಡ ಅನೇಕ ಮಹನೀಯರು ಆ ದಿವ್ಯ ಭಾಷೆಯ ಮುಖ್ಯವಾದ ಗ್ರಂಥಗಳನ್ನು ಕನ್ನಡಿಸಲು ತೊಡಗಿದ್ದಾರೆ. ಅಮರು ಕವಿಯ ಈ ಮುಕ್ತಕಗಳು ಒಬ್ಬಿಬ್ಬರಿಗೆ ಅನುವಾದಕ್ಕೆ ಸಾಮಗ್ರಿಯನ್ನು ಒದಗಿಸಿವೆ. ಹೊಸ ಛಂದಸ್ಸಿನಲ್ಲಿ ಇಂಪಾದ ಹುರುಳಾದ ಕನ್ನಡದಲ್ಲಿ ಆದರೆ ಬಿಗಿಯಾದ ಬಂಧದಲ್ಲಿ ಶ್ರೀಮಾನ್ ತೀ. ನಂ. ಶ್ರೀಕಂಠಯ್ಯನವರು ಈ ಕವಿಯ ಪಲವು ಮುಕ್ತಕಗಳನ್ನು ಭಟ್ಟಿಯಿಳಿಸಿದ್ದಾರೆ. ಪಾಂಡಿತ ರಸಿಕತೆಗಳು ಈ ಅನುವಾದಗಳಲ್ಲಿ ಹದವಾಗಿ ಮೂಡಿ ಬಂದಿವೆ. ಪ್ರೇಮ ಗೀತೆಗಳನ್ನು ರಚಿಸಿ ಅನುವಾದ ಮಾಡಿದ ಸಿದ್ಧಹಸ್ತವಲ್ಲವೆ ಅವರದು? ಅವರ ಅನುವಾದದ ಸೊಗಸನ್ನು ತೋರಿಸಲು ಎರಡು ಪದ್ಯಗಳನ್ನು ಇಲ್ಲಿ ಎತ್ತಿಕೊಟ್ಟಿದೆ.

### ಅಭಿಸಾರಿಕೆ

"ಹಬ್ಬಿದಿರುಳೊಳಗೆಲ್ಲಿ ಹೊರಟಿರುವೆ, ಚೆಲುವೆ ?"
ನನ್ನ ಪ್ರಾಣಕೆ ಮಿಗಿಲಿನಿನಿಯನಿರುವೆಡೆಗೆ!"
"ಏಕಾಂಗಿ ನೀನೆಂತು ಹೆದರೆಯೆಲೆ ತರಳೆ ?"
"ಸೋಗೆಯಂಬಿನ ಮದನನಿಲ್ಲವೇ ಜೊತೆಗೆ!"

### ಹತಾಶೆ

ಪ್ರೇಮಪಾಶವ ಕಟ್ಟು ಕಳಚಲು, ಪ್ರಣಯಗೌರವವಿಳಿಯಲು,
ಋಜುತೆ ತೊಲಗಲು, ಮುಂದಿ ನಡೆದಂತವನು ನನ್ನಲಿ ನಡೆಯಲು ;
ಇದನು ಪ್ರಿಯಸಖಿ, ನೋಡಿ ನೋಡಿ, ನೆನೆದು ಕಳೆದಾ ದಿನಗಳ–
ಅರಿಯನೇತಕೆ ಸೀಳದಿಹುದೋ ನೂರು ಪಾಲಿಗೆ ಹೃದಯವು !

ಒಲುಮೆ–ಪುಟಗಳು ೩೯, ೪೦

ಅವರ ಈ ಮುಕ್ತಕಗಳ ಅನುವಾದಗಳೆಲ್ಲ ಗ್ರಂಥರೂಪವಾಗಿ ಬೇಗ ಹೊರ ಬಿದ್ದು ರಸಿಕರಿಗೊಂದು ಹಬ್ಬವೆನಿಸಲಿ !

ಶ್ರೀಮಾನ್ ಎಸ್. ವಿ. ಪರಮೇಶ್ವರ ಭಟ್ಟರು ಕಾಳಿದಾಸನ ಕಾವ್ಯಗಳನ್ನು ಕನ್ನಡಕ್ಕೆ ತಂದು ಹೆಸರು ಗಳಿಸಿದ್ದಾರೆ. ಅವರು ಈ ಶತಕವನ್ನು ಹೊಸಛಂದಸ್ಸಿನಲ್ಲಿ, ತಿಳಿಯಾದ ಕನ್ನಡದಲ್ಲಿ, ಕನ್ನಡನುಡಿಗೆ ಸಹಜವಾದ ಪ್ರಾಸಸಂಪತ್ತಿಯನ್ನುಳಿಸಿಕೊಂಡು ಅನುವಾದ ಮಾಡಿದ್ದಾರೆ. ಅವರ ಅನುವಾದ ಇಷ್ಟರಲ್ಲೇ ಅಚ್ಚಾಗಿ ಕನ್ನಡಿಗರ ಕೈಸೇರಲಿದೆ. ಅವರ ಅನುವಾದದಿಂದ ಹಿಂದೆ ಪದ್ಯಗಳನ್ನು ಎತ್ತಿಕೊಟ್ಟಿದೆ.

ಮೇಲೆ ಹೇಳಿದ ಅನುವಾದಗಳು, ಈಗ ಪ್ರಕಟಿಸಿರುವ ಈ ಮೂಲದಿಂದ ಅಮರುಕವಿಯ ಗ್ರಂಥ ಕನ್ನಡಿಗರಿಗೆ ಹೆಚ್ಚು ಪ್ರಿಯವಾಗಿ ಅವರ ಸಂಸ್ಕಾರವನ್ನೂ ರುಚಿಶುದ್ಧಿಯನ್ನೂ ಹೆಚ್ಚಿಸಲಿ !

### ೮ ಮುಕ್ತಾಯ

ಇದುವರೆಗೆ ನನಗೆ ತಿಳಿದಮಟ್ಟಿಗೆ ಕವಿಕಾವ್ಯವಿಷಯವನ್ನು ಕುರಿತು ಬರೆದದ್ದಾಯಿತು. ಇನ್ನು ಈ ತೆರನಾದ ಗ್ರಂಥಗಳ ಪ್ರಕಟನೆಗೆ ಇರುವ ಅವಶ್ಯಕತೆಯನ್ನು ಕುರಿತು ಒಂದೆರಡು ಮಾತುಗಳನ್ನು ಹೇಳಬಯಸುತ್ತೇನೆ. ಸಂಸ್ಕೃತ ಕಷ್ಟವಾದ ಭಾಷೆಯೆಂಬ ಭಾವನೆ ನಮ್ಮಲ್ಲಿ ಅನೇಕರಿಗೆ ಉಂಟು. ಅದು ವ್ಯವಹಾರದ ಭಾಷೆಯಾಗಿ ಈಗ ಉಳಿದಿಲ್ಲ; ಆದರೆ ಭಾರತದ ಅನೇಕ ಭಾಷೆಗಳಿಗೆ ತಾಯಿಬೇರು. ಮತ್ತೆ ಕೆಲವು ಭಾಷೆಗಳಿಗೆ ಪೋಷಕಭಾಷೆ. ಅದು ಕಲಿಯಲು ಶ್ರಮಸಾಧ್ಯವಾದ ಭಾಷೆ. ತಾಯ್ನುಡಿಯಲ್ಲದ ಎಲ್ಲ ಭಾಷೆಗಳೂ ಶ್ರಮಸಾಧ್ಯವಾದ ಭಾಷೆಗಳೇ. 'ಕನ್ನಡವು ನಮ್ಮ ಉಸಿರು; ತಾಯಿಮಾತು; ಕುರಿತೋದದೆಯೂ ಬರತಕ್ಕದ್ದು. ಸಂಸ್ಕೃತವು ಎಷ್ಟಾದರೂ ಅನ್ಯಭಾಷೆ. ಆದಕ್ಕೆ ಹೆಚ್ಚು

ಪರಿಶ್ರಮ ಬೇಕು; ಕೃಷಿ ಬೇಕು; ಇದಲ್ಲದೆ ಅದು ಫಲಕ್ಕೆ ಬಂದರೆ, ಕಲ್ಪವೃಕ್ಷ.' ಅದರ ಅಭ್ಯಾಸ ಹೆಚ್ಚಿ, ಆ ಸಾಹಿತ್ಯದ ಉತ್ತಮ ಕೃತಿಗಳ ಪರಿಚಯವಾಗಲೆಂಬ ಬಯಕೆಯಿಂದ ಈ ಪ್ರಯತ್ನವನ್ನು ಮಾಡಿದೆ. ಇದು ಕನ್ನಡಕ್ಕೆ ಹೊಸ ಕ್ರಮವೇನಲ್ಲ. ಈ ವಿಧವಾದ ಪ್ರಯತ್ನಗಳಿಂದ ' ಸಂಸ್ಕೃತದಲ್ಲಿ ಸಾರವಾದದ್ದೆಲ್ಲಾ ಹೀಗೆ ಕನ್ನಡದಲ್ಲಿ ಒದಗಿದರೆ ಸಂಸ್ಕೃತ ಬದುಕುತ್ತದೆ, ಬೆಳೆಯುತ್ತದೆ.'

ಇದು ಕಥೆ ಕಾದಂಬರಿಗಳ ಕಾಲ; ಜನರಿಗೆ ಅವುಗಳಲ್ಲಿ ಅಭಿರುಚಿ ಹೆಚ್ಚು. ಹೀಗಿರುವಲ್ಲಿ ಈ ವಿಧವಾದ ಗ್ರಂಥಗಳನ್ನು ಓದುವವರಾರು? ಓದಿದರೂ ಮನಸ್ಸು ಉದ್ರೇಕಕ್ಕೆ ಎಡೆಗೊಡುವುದಿಲ್ಲವೇ? ಎಂಬ ಪ್ರಶ್ನೆ ನಮ್ಮ ಮುಂದೆ ನಿಲ್ಲುತ್ತದೆ. ನಿಜ, ಇವನ್ನು ಜನಮೆಚ್ಚುತ್ತಾರೆ; ಮೆಚ್ಚಿ ಬಾಯಿಚಪ್ಪರಿಸುತ್ತಾರೆ. ಲೇಖಕರೂ ಮುನ್ನುಡಿಗಳಲ್ಲಿ ವಿಮರ್ಶಕರನ್ನು ತೆಗಳಿ ತಮ್ಮ ಬರವಣಿಗೆಯನ್ನು ಸಮರ್ಥಿಸಿಕೊಳ್ಳುತ್ತಾರೆ ಈ ಹುಚ್ಚಿಗೆ ಏನೆಂದು ಹೇಳುವುದು? ಶೃಂಗಾರ ಪ್ರಪಂಚ-ಅದರಲ್ಲಿಯೂ ಅಕ್ರಮವಾದ ಅಶ್ಲೀಲವಾದ ಶೃಂಗಾರವೇ ಇವುಗಳ ವಸ್ತು. ತಮ್ಮ ಅನುಭವಕ್ಕೆ ಬಾರದ ವಿಷಯಗಳನ್ನು ಈ ಗ್ರಂಥಗಳಲ್ಲಿ ಪ್ರತಿಪಾದಿಸಿರುವುದರಿಂದ, ಈ ಪುಸ್ತಕಗಳ ವಾಚನದಿಂದ ರುಚಿಶುದ್ಧಿಗಿಂತ ಹೆಚ್ಚಾಗಿ ಮನಸ್ಸು ಉದ್ರೇಕಗೊಳ್ಳುತ್ತದೆ. ಕವಿಗೆ ವಿಷಯ ಮುಖ್ಯ; ಅದಕ್ಕಿಂತಲೂ ಅದನ್ನು ಹೇಳುವ ರೀತಿ ಮುಖ್ಯ. ಕವಿಯ ಮನಸ್ಸಿನಲ್ಲಿ ವಿಷಯ ಜೀರ್ಣಗೊಂಡು, ಅವನ ಪ್ರತಿಭೆಯಲ್ಲಿ ರೂಪುಗೊಂಡು ಚೆಲುವಿನ ಆಕಾರದಲ್ಲಿ ಹಸು ತಿಂದ ಹುಲ್ಲು ಹಾಲಾಗುವಂತೆ ಹೊರಬಿದ್ದು ಸಹೃದಯನಿಗೆ ಆನಂದವನ್ನುಂಟುಮಾಡಬೇಕು. ಈ ವಿಷಯದಲ್ಲಿ ದಶರೂಪಕಕಾರನಾದ ಧನಂಜಯನು ಈ ರೀತಿ ನುಡಿದಿದ್ದಾನೆ—

ರಮ್ಯಂ ಜುಗುಪ್ಸಿತಮುದಾರಮಥಾಪಿನೀಚ
ಮುಗ್ರಂ ಪ್ರಸಾದಿ ಗಹನಂ ವಿಕೃತಂ ಚ ವಸ್ತು ।
ಯದ್ವಾಪ್ಯವಸ್ತು ಕವಿಭಾವಕಭಾವ್ಯಮಾನಂ
ತನ್ನಾಸ್ತಿಯನ್ನ ರಸಭಾವಮುಪೈತಿ ಲೋಕೇ ॥ ಪ್ರಕಾಶ ೪-೮೫

ವಿಷಯ ಏನೇ ಇರಲಿ. ಮನಸ್ಸನ್ನು ಉದ್ರೇಕಕ್ಕೆ ಎಡೆಗೊಟ್ಟು ಅದನ್ನು ಮೇಲ್ಮಟ್ಟಕ್ಕೊಯ್ಯದ ಸಾಹಿತ್ಯ ಅಶ್ಲೀಲ ಸಾಹಿತ್ಯ. ಆರ್ಥಿಕ ಮತ್ತು ಸಾಮಾಜಿಕ ಸಮಸ್ಯೆಗಳ ಮುಖವಾಡವಿಟ್ಟಿರುವ, ಮಾನವಂತ

ರಾದವರು ತಲೆ ತಗ್ಗಿಸಬೇಕಾದ, ಅದರಲ್ಲೂ ಹೆಣ್ಣಿಗೆ ಮಾನ ತರದ ಸಾಹಿತ್ಯ ನಮ್ಮಲ್ಲಿ ಬೆಳೆಯಲು ಮೊದಲಾಗಿದೆ. ಯುವಕಯುವತಿಯರು ಗುಟ್ಟಾಗಿ ಮತ್ತೆ ಮತ್ತೆ ಈ ಸಾಹಿತ್ಯವನ್ನು ಓದಿ ತಮ್ಮ ಮನಸ್ಸನ್ನು ಕೆರಳಿಸಿಕೊಳ್ಳುತ್ತಿದ್ದಾರೆ. ಈ ತೆರನಾದ ಸಾಹಿತ್ಯಸೃಷ್ಟಿ ಎಷ್ಟು ಬೇಗ ನಿಂತರೆ ನಾಡಿಗೆ ನುಡಿಗೆ ಅಷ್ಟುಬೇಗ ಕ್ಷೇಮ; ಜನಕ್ಕೆ ಕಲ್ಯಾಣ, ಲಾಭ. ಈ ವಿಧವಾದ ಗ್ರಂಥಗಳ ವಾಚನ ನಗರ ಸೌಂದರ್ಯವನ್ನು ನೋಡ ಹೊರಟು ಚರಂಡಿಯನ್ನು ನೋಡಿದಂತಾಗುತ್ತದೆ. ಅದು ಹಾಗಿರಲಿ. ರುಚಿ ಶುದ್ಧಿಯನ್ನೂ, ಜೀವನಾನುಭವವನ್ನೂ, 'ಆನಂದವನ್ನೂ ತರುವ ಮಹಾಗ್ರಂಥಗಳು-ಅವು ಯಾವ ಭಾಷೆಯವೇ ಆಗಿರಲಿ-ಅನುವಾದದ ಮೂಲಕವೋ ಇಲ್ಲವೆ ವ್ಯಾಖ್ಯಾನದ ಮೂಲಕವೋ ದೊರೆಯುತ್ತಿರಬೇಕು. 'ನಾಡ ಹಿರಿಯರು ಜನಕ್ಕೆ ದೊಡ್ಡವ್ಯಕ್ತಿಗಳ ಆದರ್ಶವನ್ನು ಎತ್ತಿ ಎತ್ತಿ ತೋರಿಸುವಂತೆ, ನಾಡ ಸಾಹಿತ್ಯವೂ ದೊಡ್ಡ ದೊಡ್ಡ ಗ್ರಂಥಗಳ ಪರಿಚಯವನ್ನೂ ಮಾಡಿಕೊಡುತ್ತಿರಬೇಕು. ಯಾವ ಕಾಲದಲ್ಲಿಯೂ ಜನಕ್ಕೆ ಅವುಗಳ ಯೋಗ್ಯತೆಯನ್ನು ಕಾಣುವಷ್ಟು ಪರಿಜ್ಞಾನವಿದ್ದೇ ಇರುತ್ತದೆ, ತೆಂಗಿನ ಮರಕ್ಕೂ ಕುರುಚಲಗಿಡಕ್ಕೂ ಅಂತರವು ಎಂದಿಗೂ ಯಾರ ಕಣ್ಣಿಗೂ ಅಳಿಸಿಹೋಗುವುದಿಲ್ಲ.' ಈ ಧ್ಯೇಯವೇ ಈ ಗ್ರಂಥದ ಪ್ರಕಟನೆಗೆ ಕಾರಣ. ಈ ಗ್ರಂಥದ ಒಂದೊಂದು ಪದ್ಯವೂ ಒಂದೊಂದು ಪ್ರಪಂಚ. ಇವುಗಳನ್ನು ಓದಿದಾಗ ಅವರವರ ಸಂಸ್ಕಾರ ಅನುಭವಗಳಿಗೆ ತಕ್ಕಂತೆ ಸದ್ದುಗದ್ದಲವಿಲ್ಲದ ಪ್ರೇಮ ಪ್ರಪಂಚವೊಂದು ನಮ್ಮೆದುರಿಗೆ ನಿಂತು ಮನಸ್ಸು ಹರ್ಷಗೊಳ್ಳುತ್ತದೆ. ತಮ್ಮ ಜೀವನಾನುಭವವನ್ನು ಕವಿ ನುಡಿಯುತ್ತಿರುವನೋ ಎಂಬ ಭಾವನೆಯುಂಟಾಗುತ್ತದೆ. ಆದ್ದರಿಂದಲೇ ಸಾವಿರಕ್ಕೆ ಮೇಲ್ಪಟ್ಟು ವರ್ಷಗಳು ಉರುಳಿ ಹೋಗಿದ್ದರೂ ಅಮರು ಕವಿ ರಸಿಕ ಜನರಿಗೆ ಮೆಚ್ಚಿಗೆಯಾಗಿ, ರಸಿಕತೆಗೆ ಕೈಗಂಭವಾಗಿ ನಿಂತಿದ್ದಾನೆ. ಅವನ ಪ್ರಭಾವಕ್ಕೆ, ಕೀರ್ತಿಗೆ ಎಂದಿಗೂ ಕುಂದಿಲ್ಲ.

'ವಿಶ್ವಭಾರತಿ ಶರಣು, ಕಿರುತೀರ್ಥವಲ್ತು'
'ಸಿರಿಗನ್ನಡಂ ಗೆಲ್ಗೆ.'

ಎಚ್. ಎಂ. ಎಸ್.

# ಅಮರು ಶತಕದ ಪದ್ಯಗಳ ಅಕಾರಾದಿ ಅನುಕ್ರಮಣಿಕೆ

ಮೊದಲನೆಯದು ಪದ್ಯಸಂಖ್ಯೆ ; ಎರಡನೆಯದು ಪುಟಸಂಖ್ಯೆ.

ವ–ವಸಂತತಿಲಕ. ವಂ–ವಂಶಸ್ಥ. ಮಾ–ಮಾಲಿನಿ. ಮಂ–ಮಂದಾಕ್ರಾಂತ.
ಶಿ–ಶಿಖರಿಣಿ. ಹ–ಹರಿಣಿ. ಅ–ಅನುಷ್ಟುಬ್. ಸ್ರ–ಸ್ರಗ್ಧರೆ.
ಉಳಿದ ಪದ್ಯಗಳನ್ನು ಶಾರ್ದೂಲವಿಕ್ರೀಡಿತವೆಂದು ಭಾವಿಸಬೇಕು.

ಶ್ರೀರಸ್ತು

ಅಮರು ಕವಿಯ

# ಅಮರು ಶತಕಮ್

## ೧

### ಪ್ರಾರ್ಥನೆ

ಪಾರ್ವತಿಯ ಕಡೆಗಣ್ಣಿನ ನೋಟ ನಿನ್ನನ್ನು ಕಾಪಾಡಲಿ

**ಜ್ಯಾಕೃಷ್ಟಿಬದ್ಧಖಟಕಾಮುಖ* ಪಾಣಿಪೃಷ್ಠ**
**ಪ್ರೇಂಖನ್ನಖಾಂಶುಚಯಸಂವಲಿತೋಂಬಿಕಾಯಾಃ ।**
**ತ್ವಾಂ ಪಾತು ಮಂಜರಿತಪಲ್ಲವಕರ್ಣಪೂರ**
**ಲೋಭಭ್ರಮದ್ಭ್ರಮರವಿಭ್ರಮಭೃತ್ಕಟಾಕ್ಷಃ ॥೧॥**

ಅಂಬಿಕಾಯಾಃ-ಪಾರ್ವತಿಯ, ಜ್ಯಾಕೃಷ್ಟಿ-ಬಿಲ್ಲಿನ ಹಗ್ಗದ ಎಳೆತದಿಂದ, ಬದ್ಧ-ಉಂಟಾದ, ಖಟಕಾಮುಖ-ಬಾಗಿದ ಬೆರಳುಳ್ಳ (ಇದು ಒಂದು ಅಗುಂಲಿವಿನ್ಯಾಸದ ಮುದ್ರೆ) ಪಾಣಿಪೃಷ್ಠ-ಅಂಗೈಯಲ್ಲಿ, ಪ್ರೇಂಖತ್-ಪ್ರಕಾಶಮಾನವಾದ, ನಖ+ಅಂಶು ಚಯ-ಉಗುರಿನ ಕಾಂತಿಯ ಸಮೂಹದಿಂದ, ಸಂವಲಿತಃ-ಕೂಡಿ ಕೊಂಡಿರುವ, ಮಂಜರಿತ-ಗೊಂಚಲಿನಂತಿರುವ, ಪಲ್ಲವ ಚಿಗುರೆಂಬ, ಕರ್ಣಪೂರ-ಓಲೆಯಲ್ಲಿ, ಲೋಭ-ಆಸೆಯಿಂದ, ಭ್ರಮತ್-ಸುತ್ತುತ್ತಿರುವ, ಭ್ರಮರ-ದುಂಬಿಯ, ವಿಭ್ರಮಭೃತ್-ವಿಲಾಸವನ್ನು ಹೊಂದಿರುವ, ಕಟಾಕ್ಷಃ ಕಡೆಗಣ್ಣಿನ ನೋಟ, ತ್ವಾಂ-ನಿನ್ನನ್ನು, ಪಾತು-ಕಾಪಾಡಲಿ.

ಬಿಲ್ಲಿನ ಹಗ್ಗದ ಎಳೆತದಿಂದ ಉಂಟಾದ ಅಂಗುಲಿವಿನ್ಯಾಸವು

---

* ತರ್ಜನೀ ಮಧ್ಯಮಾಮಧ್ಯೇ ಪುಂಖೇಽಂಗುಷ್ಠೇನ ಪೀಡ್ಯತೇ ।
ತಸ್ಮಿನ್ನನಾಮಿಕಾಯೋಗಃ ಸ ಹಸ್ತಃ ಖಟಕಾಮುಖಃ ॥ ಶೃಂಗಾರದೀಪಿಕಾ.

ಖಟಕಾಮುಖವೆಂಬ ಮುದ್ರೆಯಿಂದ ಕೂಡಿ ಅಂಗೈಯಲ್ಲಿ ಉಗುರಿನ ಕಾಂತಿಯನ್ನು ಹರಡುವುದು. ಗೊಂಚಲಾದ ಚಿಗುರಿನ ಕಿವಿಯೋಲೆಯಲ್ಲಿ ಮಕರಂದದ ಆಸೆಯಿಂದ ಹೂವನ್ನು ಸುತ್ತುತ್ತಿರುವ ದುಂಬಿಯ ವಿಲಾಸವನ್ನು ಹೊಂದಿರುವ ಮೇಲೆ ಹೇಳಿದ ಉಗುರಿನ ಕಾಂತಿಯಿಂದ ಕೂಡಿದ ಅಂಬಿಕೆಯ ಕಡೆಗಣ್ಣಿನ ನೋಟವು ನಿನ್ನನ್ನು ಕಾಪಾಡಲಿ.

೨

ತ್ರಿಪುರದಹನಸಮಯದಲ್ಲಿ ಕಾಮುಕನಂತೆ ಮೆರೆದ ಈಶ್ವರನ
ಶರಾಗ್ನಿ ನಿಮ್ಮ ಪಾಪಗಳನ್ನು ದಹಿಸಲಿ.

**ಕ್ಷಿಪ್ತೋ ಹಸ್ತಾವಲಗ್ನಃ ಪ್ರಸಭಮಭಿಹತೋಽಪ್ಯಾದದಾನೋಽಂಶುಕಾಂತಂ**
**ಗೃಹ್ಣನ್ ಕೇಶೇಷ್ವಪಾಸ್ತಶ್ಚರಣ ನಿಪತಿತೋ ನೇಕ್ಷಿತಃ ಸಂಭ್ರಮೇಣ ।**
**ಆಲಿಂಗನ್ಯೋಽವಧೂತಸ್ತ್ರಿಪುರಯುವತಿಭಿಃ ಸಾಶ್ರುನೇತ್ರೋತ್ಪಲಾಭಿಃ**
**ಕಾಮೀವಾರ್ದ್ರಾಪರಾಧಃ ಸ ದಹತು ದುರಿತಂ ಶಾಂಭವೋ ವಃ ಶರಾಗ್ನಿಃ ॥**

ಯಃ-ಯಾವ, ಶಾಂಭವಃ-ಈಶ್ವರನ ಸಂಬಂಧವಾದ, ಶರಾಗ್ನಿಃ-ಬಾಣಾಗ್ನಿ, ಸಾಶ್ರುನೇತ್ರೋತ್ಪಲಾಭಿಃ-ಕಣ್ಣೀರಿನಿಂದ ಕೂಡಿ ಕನ್ನೈದಿಲೆಯಂತಿರುವ ಕಣ್ಣುಗಳುಳ್ಳ, ತ್ರಿಪುರಯುವತಿಭಿಃ-ತ್ರಿಪುರಾಸುರರ ಪತ್ನಿಯರಿಂದ, ಹಸ್ತಾವಲಗ್ನಃ-ಕೈಯ್ಯನ್ನು ಹಿಡಿದರೂ, ಕ್ಷಿಪ್ತಃ-ತಳ್ಳಲ್ಪಡುತ್ತಲೂ, ಪ್ರಸಭಂ-ಬಲಾತ್ಕಾರವಾಗಿ, ಅಂಶುಕಾಂತಂ-ಸೀರೆಯ ಸೆರಗನ್ನು, ಆದದಾನೋಽಪಿ-ಹಿಡಿದೆಳೆದರೂ, ಅಭಿಹತಃ-ಹೊಡೆಯಲ್ಪಡುತ್ತಲೂ, ಕೇಶೇಷು-ತಲೆಗೂದಲಲ್ಲಿ (ಲನ್ನು), ಗೃಹ್ಣನ್-ಹಿಡಿದರೂ, ಅಪಾಸ್ತಃ-ದೂರಕ್ಕೆ ತಳ್ಳಲ್ಪಡುತ್ತಲೂ, ಸಂಭ್ರಮೇಣ-ಕಳವಳದಿಂದ, ಚರಣನಿಪತಿತಃ-ಕಾಲಿಗೆ ಬೀಳುತ್ತಿದ್ದರೂ, ನೇಕ್ಷಿತಃ-ನೋಡಲ್ಪಡದೆಯೂ, ಆಲಿಂಗನ್-(ಬಲಾತ್ಕಾರವಾಗಿ) ಅಪ್ಪಿದರೂ, ಅವಧೂತಃ-ತಿರಸ್ಕರಿಸಲ್ಪಡುತ್ತ,

**ಆದ್ರ್ರಾಪರಾಧಃ-ಹೊಸದಾಗಿ ತಪ್ಪನ್ನೆಸಗಿದ, ಕಾಮೀ ಇವ-ಕಾಮುಕನಂತೆ ನಡೆದುಕೊಂಡ, ಸಃ-ಆ ಬಾಣಾಗ್ನಿ, ವಃ-ನಿಮ್ಮ, ದುರಿತಂ-**ಪಾಪರಾಶಿಯನ್ನು, ದಹತು-ಸುಟ್ಟುಬಿಡಲಿ.

ತ್ರಿಪುರದಹನ ಕಾಲದಲ್ಲಿ ಈಶ್ವರನ ಬಾಣಾಗ್ನಿ ಹೊಸತಪ್ಪನ್ನು ಮಾಡಿ ಸಿಕ್ಕ ಕಾಮುಕನಂತೆ ನಡೆದುಕೊಂಡಿತು. ಕಣ್ಣೀರಿನಿಂದ ಕೂಡಿದ ತ್ರಿಪುರಯುವತಿಯರ ಕೈಯನ್ನು ಹಿಡಿದರೂ ಅವರು ಅದನ್ನು ತಳ್ಳುತ್ತಿದ್ದರು ; ಬಲಾತ್ಕಾರವಾಗಿ ಅದು ಅವರ ಸೀರೆಯ ಸೆರಗನ್ನು ಹಿಡಿದೆಳೆದರೂ ಅವರು ಅದನ್ನು ಹೊಡೆಯುತ್ತಿದ್ದರು; ತಲೆಗೂದಲನ್ನು ಅದು ಸವರುತ್ತಿದ್ದರೂ ಅವರು ಅದನ್ನು ದೂರ ತಳ್ಳುತ್ತಿದ್ದರು ; ಕಳವಳದಿಂದ ಅದು ಕಾಲಿಗೆ ಬೀಳುತ್ತಿದ್ದರೂ, ಅವರು ಈ ಶರಾಗ್ನಿಯನ್ನು ಕಣ್ಣೆತ್ತಿ ಕೂಡ ನೋಡುತ್ತಿರಲಿಲ್ಲ; ಬಲಾತ್ಕಾರವಾಗಿ ಅವರನ್ನು ಬಾಣಾಗ್ನಿ ಅಪ್ಪಿದರೂ ಅದನ್ನು ತಿರಸ್ಕರಿಸುತ್ತಿದ್ದರು ; ಅಂತಹ ಕಾಮುಕನಂತಿರುವ ಈಶ್ವರನ ಬಾಣಾಗ್ನಿ ನಿಮ್ಮ ಪಾಪಗಳನ್ನು ದಹಿಸಲಿ.

೩

ಅಮೃತ ಮಥನ ವ್ಯರ್ಥ !

**ಸಂದಷ್ಟೇಽಧರಪಲ್ಲವೇ ಸಚಕಿತಂ ಹಸ್ತಾಗ್ರಮಾಧುನ್ವತೀ**
**ಮಾ ಮಾ ಮುಂಚ ಶಠೇತಿ ಕೋಪವಚನೈರಾನರ್ತಿತ**
**ಭ್ರೂಲತಾ ।**
**ಸೀತ್ಕಾರಾಂಚಿತಲೋಚನಾ ಸರಭಸಂ ಯೈಶ್ಚುಂಬಿತಾ ಮಾನಿನೀ**
**ಪ್ರಾಪ್ತಂ ತೈರಮೃತಂ ಶ್ರಮಾಯ ಮಥಿತೋ ಮೂಢೈಃ**
**ಸುರೈಃ ಸಾಗರಃ ॥**

ಅಧರಪಲ್ಲವೇ-ಚಿಗುರಿನಂತಿರುವ ಕೆಂಪಾದ ತುಟಿಯು, ಸಂದಷ್ಟೇ-(ಮುತ್ತಿಡುವ ಸಮಯದಲ್ಲಿ) ಕಚ್ಚಲ್ಪಡಲು, ಸಚಕಿತಂ-ಹೆದರಿದವಳಂತೆ, ಹಸ್ತಾಗ್ರಂ-ತನ್ನ ಕೈಯ ತುದಿಯನ್ನು, ಆಧುನ್ವತೀ-ತಡೆಗಟ್ಟುತ್ತಾ, ಶಠ-**ಧೂರ್ತನೇ, ಮಾ ಮಾ-ಬೇಡ ಬೇಡ, ಮುಂಚ ಬಿಡು, ಇತಿ-ಹೀಗೆಂದು, ಕೋಪವಚನೈಃ-ಪ್ರಣಯಕೋಪವನ್ನು ಹೊರಸೂಸುವ ಮಾತುಗಳಿಂದ,**

ಆನರ್ತಿತ-ಕೊಂಕಾಗಿ ಬಾಗಿಸಿದ,ಭ್ರೂಲತಾ-ಬಳ್ಳಿಯಂತಿರುವ ಹುಬ್ಬುಳ್ಳ, ಸೀತ್ಕಾರ ರಸಾನುಭವಕಾಲದ ಶಬ್ದದಿಂದ, ಅಂಚಿತ-ತಿರುಗಿಸಿದ, ಲೋಚನಾ-ಕಣ್ಣುಳ್ಳ, ಮಾನಿನೀ ಯುವತಿಯು, ಯೈಃ-ಯಾರಿಂದ, ಚುಂಬಿತಾ-ಮುತ್ತಿಡಲ್ಪಡುವಳೋ, ತೈಃ-ಅಂತಹವರಿಂದ, ಅಮೃತಂ-ಅಮೃತವು, ಪ್ರಾಪ್ತಂ-ಹೊಂದಲ್ಪಡುವುದು. ಮೂಢೈಃ-ಇದನ್ನರಿಯದ, ಸುರೈಃ-ದೇವತೆಗಳಿಂದ, ಸಾಗರಃ-ಕ್ಷೀರಸಮುದ್ರವು, ಆಯಾಸಾಯ-ಅತ್ಯಂತ ಶ್ರಮದಿಂದ, ಮಥಿತಃ-ಕಡೆಯಲ್ಪಟ್ಟಿತು.

ಚಿಗುರಿನಂತೆ ಕೆಂಪಾದ ತುಟಿಯನ್ನು ಪ್ರಿಯನು ಮುತ್ತಿಡುವ ಸಮಯದಲ್ಲಿ ಕಚ್ಚಲು ಹೆದರಿದವಳಂತೆ, ಪ್ರಿಯೆ ತನ್ನ ಹಸ್ತಾಗ್ರದಿಂದ ಪ್ರಿಯತಮನ ಕಾರ್ಯವನ್ನು ತಡೆಗಟ್ಟುತ್ತ 'ಬೇಡ ಬೇಡ; ನನ್ನನ್ನು ಬಿಡು.' ಎಂದು ಪ್ರಣಯಕೋಪವನ್ನು ಹೊರಸೂಸುವ ಮಾತುಗಳನ್ನಾಡುತ್ತ, ಕೊಂಕಾದ ಹುಬ್ಬಿನಿಂದ ಕೂಡಿ, ರಸಾನುಭವಕಾಲದಲ್ಲಿ ತಿರುಗಿಸಿದ ಕಣ್ಣುಳ್ಳ ಪ್ರಿಯತಮೆಯನ್ನು ಯಾರು ಮುತ್ತಿಡುವರೋ, ಆವರು ಅಮೃತವನ್ನು ಹೊಂದುವರು ಇದನ್ನರಿಯದ ದೇವತೆಗಳು ಅಮೃತಕ್ಕಾಗಿ ವ್ಯರ್ಥವಾಗಿ ಸಮುದ್ರವನ್ನು ಕಡೆದರು

೪

ಪರಪುರುಷನಲ್ಲಿ ಮೊತ್ತಮೊದಲು ಅನುರಾಗವನ್ನು ಸೂಚಿಸುತ್ತಿರುವ ನಾಯಿಕೆಯನ್ನು ಕುರಿತು ಅವಳ ಸಖಿ ರಹಸ್ಯವಾಗಿ ಈ ರೀತಿ ಪ್ರಶ್ನಿಸುವಳು.

**ಅಲಸವಲಿತೈಃ ಪ್ರೇಮಾರ್ದ್ರಾರ್ದ್ರೈರ್ಮುಹುರ್ಮುಕುಲೀಕೃತೈಃ**
**ಕ್ಷಣಮಭಿಮುಖೈರ್ಲಜ್ಜಾಲೋಲೈರ್ನಿಮೇಷಪರಾಙ್ಮುಖೈಃ।**
**ಹೃದಯನಿಹಿತಂ ಭಾವಾಕೂತಂ ವಮದ್ಭಿರಿವೇಕ್ಷಣೈಃ**
**ಕಥಯ ಸುಕೃತೀ ಕೋಽಯಂ ಮುಗ್ಧೇ ತ್ವಯಾದ್ಯ**
**ವಿಲೋಕ್ಯತೇ ॥**

ಎಲೆ, ಮುಗ್ಧೇ, ಅದ್ಯ-ಈಗ, ತ್ವಯಾ-ನಿನ್ನಿಂದ, ಅಲಸ-ಭಾವ ಗರ್ಭಿತವಾದ ಮಾಂದ್ಯದಿಂದ, ವಲಿತೈಃ-ಕೊಂಕಾಗಿ ಎವ, ಪ್ರೇಮಾರ್ದ್ರ-

ಪ್ರೀತಿಯಿಂದ ನೆಸೆದು, ಆರ್ದ್ರೈಃ-ಸ್ನಿಗ್ಧವಾಗಿರುವ ಎಂದರೆ ಸ್ನೇಹವನ್ನು ಸೂಚಿಸುತ್ತಿರುವ, ಮುಹುಃ ಮುಹುಃ-ಬಾರಿಬಾರಿಗೂ, ಮುಕುಲೀಕೃತೈಃ-ನೋಟದ ಸುಖಾನುಭವದಿಂದ ಅರ್ಧ ಮುಚ್ಚಿರುವ, ಕ್ಷಣಂ-ಕ್ಷಣಕಾಲ, ಅಭಿಮುಖೈಃ-ನಾಯಕನ ಎದುರಿನಲ್ಲಿ ನಿಲ್ಲುವ, ಲಜ್ಜಾ-ನಾಚಿಕೆಯಿಂದ, ಆಲೋಲೈಃ-ಆಗಾಗ ಚಲಿಸುತ್ತಿರುವ, ನಿಮೇಷಪರಾಙ್ಮುಖೈಃ-ರೆಪ್ಪೆಯಿಂದ ಕಣ್ಣನ್ನು ಮುಚ್ಚಲು ಇಷ್ಟವಿಲ್ಲದಿರುವ, ಹೃದಯನಿಹಿತಂ-ಹೃದಯದಲ್ಲಿ ಹುದುಗಿಟ್ಟಿರುವ, ಭಾವ+ಆಕೂತಂ-ಅಭಿಲಾಷೆಯರೂಪವಾದ ಬಯಕೆಯನ್ನು, ವಮದ್ಭಿಃ+ಇವ-ಹೊರಸೂಸುತ್ತಿರುವುದೋ ಎಂಬಂತಿರುವ, ಈಕ್ಷಣೈಃ-ದೃಷ್ಟಿವಿನ್ಯಾಸಗಳಿಂದ, ಕೋಽಯಂ-ಯಾವ, ಸುಕೃತೀ-ಪುಣ್ಯಶಾಲಿಯು, ವಿಲೋಕ್ಯತೇ-ನೋಡಲ್ಪಡುವನು ? ಕಥಯ-ಹೇಳು.

ಎಲೆ ಮುಗ್ಧೆ, ಭಾವಗರ್ಭಿತವಾದ ಮಾಂದ್ಯದಿಂದ ಕೂಡಿ, ಪ್ರೇಮದಿಂದ ಸ್ನೇಹವನ್ನು ಸೂಚಿಸುತ್ತಿರುವ ನೋಟದ ಸುಖಾನುಭವದಿಂದ ಅರ್ಧಮುಚ್ಚಿರುವ, ಕ್ಷಣಕಾಲ ನಾಯಕನೆದುರಿನಲ್ಲಿ ನಿಂತು, ಆದರೆ ನಾಚಿಕೆಯಿಂದ ಆಗಾಗ ಚಲಿಸುತ್ತಿರುವ ರೆಪ್ಪೆಯಿಂದ ಕಣ್ಣನ್ನು ಮುಚ್ಚಲು ಇಷ್ಟವಿಲ್ಲದಿರುವ, ಹೃದಯದಲ್ಲಿರುವ ರತಿಸುಖದ ಬಯಕೆಯನ್ನು ಹೊರಸೂಸುತ್ತಿರುವ ಕಣ್ಣುಗಳಿಂದ ಯಾವ, ಪುಣ್ಯಶಾಲಿಯನ್ನು ಈಗ ನೀನು ನೋಡುತ್ತಿರುವೆ ? ಹೇಳು.

**೫**

ಹೆಣ್ಣಿನ ಕಣ್ಣಿನ ನೋಟ

**ದೂರಾದುತ್ಸುಕಮಾಗತೇ ವಿವಲಿತಂ ಸಂಭಾಷಿಣಿ ಸ್ಫಾರಿತಂ**
**ಸಂಶ್ಲಿಷ್ಯತ್ಯರುಣಂ ಗೃಹೀತವಸನೇ ಕೋಪಾಂಚಿತ**
**ಭ್ರೂಲತಮ್ ।**
**ಮಾನಿನ್ಯಾಶ್ಚರಣಾನತಿವ್ಯತಿಕರೇ ಬಾಷ್ಪಾಂಬು**
**ಪೂರ್ಣೇಕ್ಷಣಂ**
**ಚಕ್ಷುರ್ಜಾತಮಹೋ ಪ್ರಪಂಚಚತುರಂ ಜಾತಾಗಸಿ**
**ಪ್ರೇಯಸಿ ॥**

ಜಾತಾಗಸಿ-ಕಂಡುಬಂದ ಅಪರಾಧವುಳ್ಳ, ಪ್ರೇಯಸಿ-ಪ್ರಿಯನ

ವಿಷಯದಲ್ಲಿ, ಮಾನಿನ್ಯಾಃ-ತರುಣಿಯ, ಚಕ್ಷುಃ-ಕಣ್ಣು, ದೂರಾತ್-ದೂರದಲ್ಲಿ ನಲ್ಲನಿರುವಾಗ, ಉತ್ಸುಕಂ-ಕುತೂಹಲವುಳ್ಳದಾಗುವುದು. ಆಗತೇ-ಸಮೀಪಕ್ಕೆ ಬಂದಾಗ, ವಿವಲಿತಂ-ವಕ್ರವಾಗಿ ಬೇರೆ ಕಡೆ ತಿರುಗುವುದು. ಸಂಭಾಷಿಣಿ-ಪ್ರಿಯನು ಅವಳನ್ನು ನುಡಿಸಿದಾಗ, ಸ್ಫಾರಿತಂ-ಅದುರುವುದು. ಸಂಶ್ಲಿಷ್ಯತಿ-ಅವಳನ್ನು ನಲ್ಲನು ಅಪ್ಪಿಕೊಳ್ಳಲು, ಅರುಣಂ-ಕೆಂಪಾಗುವುದು. ಗೃಹೀತವಸನೇ-ಹಿಡಿಯಲ್ಪಟ್ಟ ವಸ್ತ್ರವುಳ್ಳವಳಾಗಲು, ಕೋಪಾಂಚಿತ-ಕೋಪದಿಂದ ಕೊಂಕಾದ, ಭ್ರೂಲತಂ-ಹುಬ್ಬಿನಬಳ್ಳಿಯುಳ್ಳದ್ದಾಗುವುದು. ಚರಣಾನತಿವ್ಯತಿಕರೇ-ಪ್ರಿಯನು ನಲ್ಲೆಯ ಕಾಲಿಗೆ ಬೀಳಲು ಹೋದಾಗ, ಬಾಷ್ಪಾಂಬು-ಕಣ್ಣೀರಿನಿಂದ, ಪೂರ್ಣ-ತುಂಬಿದ, ಈಕ್ಷಣಂ-ಕಣ್ಣುಳ್ಳದ್ದಾಗಿ, ಜಾತಂ-ಆಗುವುದು. ಪ್ರಪಂಚಚತುರಂ-ಲೋಕದಲ್ಲಿಚಮತ್ಕಾರವುಳ್ಳ, ಚಕ್ಷುಃ ಹೆಣ್ಣಿನ ನೋಟ, ಅಹೋ-ಆತ್ಯಾಶ್ಚರ್ಯ ಕರವಾದುದಲ್ಲವೇ?

ತನ್ನಲ್ಲಿ ಅಪರಾಧ ಮಾಡಿದ ಪ್ರಿಯನ ವಿಷಯದಲ್ಲಿ ತರುಣಿಯ ಕಣ್ಣು ದೂರದಲ್ಲಿ ಅವಳ ನಲ್ಲನಿರುವಾಗ ಕುತೂಹಲದಿಂದ ಕೂಡಿರುವುದು. ಅವನು ಹತ್ತಿರಕ್ಕೆ ಬರಲು ವಕ್ರವಾಗಿ ಬೇರೆಯ ಕಡೆ ತಿರುಗುವುದು. ಪ್ರಿಯನು ಅವಳನ್ನು ನುಡಿಸಿದಾಗ ಅದುರುವುದು. ಅವನು ಅವಳನ್ನು ಅಪ್ಪಲು ಕೆಂಪಾಗುವುದು. ನಲ್ಲನು ಪ್ರಿಯತಮೆಯ ಸೀರೆಯ ಸೆರಗನ್ನು ಹಿಡಿಯಲು, ಕೋಪದಿಂದ ಹುಬ್ಬು ಕೊಂಕಾಗುವುದು. ಪ್ರಿಯನು ನಲ್ಲೆಯ ಕಾಲಿಗೆಬೀಳಲು ಹೋದಾಗ ಕಣ್ಣೀರಿನಿಂದ ತುಂಬುವುದು. ಹೀಗೆ ಲೋಕದಲ್ಲಿ ಹೆಣ್ಣಿನ ನೋಟ ಆಶ್ಚರ್ಯಕರವಾದುದು!

೬

ಪ್ರಿಯೆಯ ಮನೆಯ ಬೀದಿಯಲ್ಲಿ ಸುಳಿಯುವುದೇ
ಪ್ರೇಮಿಗೆ ಎಷ್ಟೋ ಸಂತಸ!

**ಚಕ್ಷುಃಪ್ರೀತಿಪ್ರಸಕ್ತೇ ಮನಸಿ ಪರಿಚಯೋ ಚಿಂತ್ಯ**
**ಮಾನಾಭ್ಯುಪಾಯೇ**
**ರಾಗೇ ಯಾತೇಽತಿಭೂಮಿಂ ವಿಕಸತಿ ಸುತರಾಂ ಗೋಚರೇ**
**ದೂತಿಕಾಯಾಃ|**

**ಆಸ್ತಾಂ ದೂರೇಣ ತಾವತ್ಸರಭಸದಯಿತಾಲಿಂಗ**
**ನಾನಂದಲಾಭ**
**ಸ್ತದ್ಗೇಹೋಪಾಂತರಥ್ಯಾಭ್ರಮಣಮಪಿ ಪರಾಂ**
**ನಿರ್ವೃತಿಂ ಸಂತನೋತಿ ||**

ಮನಸಿ-(ನನ್ನ) ಮನಸ್ಸು, ಚಕ್ಷುಃಪ್ರೀತಿ-ನೇತ್ರಾನಂದದ ಅನುಭವದಲ್ಲಿ, ಪ್ರಸಕ್ತೇ-ಅನುರಕ್ತವಾಗಲು, ಪರಿಚಯೇ-ಸ್ನೇಹ (ಸಂಬಂಧವು), ಚಿಂತ್ಯಮಾನ-ಯೋಚಿಸಲ್ಪಡುವ, ಅಭ್ಯುಪಾಯೇ-ನಾನಾ ರೀತಿಯ ಉಪಾಯಗಳನ್ನುಳ್ಳದ್ದಾಗಲು, ರಾಗೇ-ಅನುರಾಗವು ಎಂದರೆ ಪ್ರೇಮವು, ಅತಿಭೂಮಿಂ-ಮಿತಿಮೀರಿದ ಭಾವವನ್ನು, ಯಾತೇ-ಹೊಂದಲಾಗಿ, ದೂತಿಕಾಯಾಃ-ನನ್ನ ಪ್ರಿಯತಮೆಯ ಸಖಿಯ, ಗೋಚರೇ-ನೋಡುವಿಕೆಯು, ಸುತರಾಂ-ಇನ್ನೂ ಹೆಚ್ಚಾಗಿ, ವಿಕಸತಿ-ನನ್ನನ್ನು ಉದ್ರೇಕಗೊಳಿಸಲು, ಸರಭಸ-ಗಾಢವಾದ, ದಯಿತಾ-ಪ್ರಿಯೆಯ, ಆಲಿಂಗನ-ಅಪ್ಪುವಿಕೆಯ, ಆನಂದಲಾಭಸ್ತಾವತ್-ಸಂತೋಷದ ಪ್ರಾಪ್ತಿಯಾದರೋ, ದೂರೇಣ-ದೂರದಲ್ಲಿ, ಆಸ್ತಾಂ-ಇರಲಿ. ತದ್ಗೇಹ-ಅವಳ ಮನೆಯ, ಉಪಾಂತ-ಸಮೀಪದ, ರಥ್ಯಾ-ಬೀದಿಯ, ಭ್ರಮಣಂಅಪಿ-ಸಂಚಾರವೂ ಕೂಡ, ಪರಾಂ-ಅತಿಶಯವಾದ, ನಿರ್ವೃತಿಂ-ಸೌಖ್ಯವನ್ನು, ಸಂತನೋತಿ-ಉಂಟುಮಾಡುತ್ತದೆ.

ಮನಸ್ಸು ಪ್ರಿಯತಮೆಯನ್ನು ಕಣ್ಣಿನಿಂದ ಕಂಡು ಪ್ರೇಮವನ್ನು ವ್ಯಕ್ತಪಡಿಸಿ ಅವಳ ಸ್ನೇಹವನ್ನು ಪಡೆಯುವ ನಾನಾ ಉಪಾಯವನ್ನು ಯೋಚಿಸುತ್ತಿರಲು, ಅವಳಲ್ಲಿ ಪ್ರೇಮವು ಮಿತಿಮೀರಿರಲು, ದೂತಿಯನ್ನು ಕಂಡ ಬಳಿಕ ಪ್ರಿಯತಮೆಯನ್ನು ನೋಡಬೇಕೆನ್ನುವ ಆಸೆ ಉದ್ರೇಕಗೊಳಿಸುತ್ತಿರಲು, ಆ ನನ್ನ ಪ್ರಿಯತಮೆಯನ್ನು ಪಡೆದು ಅವಳನ್ನು ಬಿಗಿಯಾಗಿ ಅಪ್ಪಿ ಸಂತೋಷವನ್ನು ಹೊಂದುವ ಮಾತು ಹಾಗಿರಲಿ; ಅವಳ ಮನೆಯ ಸಮೀಪದ ಬೀದಿಯಲ್ಲಿ ಸುಳಿಯುವುದೂ ಕೂಡ, ಅತಿಶಯವಾದ ಸಂತೋಷವನ್ನು ತರುತ್ತದೆ.

೭
ಅಭಿಸಾರಿಕೆ

**ಕ್ವ ಪ್ರಸ್ಥಿತಾಸಿ ಕರಭೋರು ಘನೇ ನಿಶೀಥೇ**
**ಪ್ರಾಣಾಧಿಕೋ ವಸತಿ ಯತ್ರ ಜನಃ ಪ್ರಿಯೋ ಮೇ।**
**ಏಕಾಕಿನೀ ಬತ ಕಥಂ ನ ಬಿಭೇಷಿ ಬಾಲೇ**
**ನನ್ವಸ್ತಿ ಪುಂಖಿತಶರೋ ಮದನಃ ಸಹಾಯಃ॥**

ಹೇ ಕರಭೋರು-ಮಣಿಕಟ್ಟು ಮತ್ತು ಕಿರುಬೆರಳಿನ ನಡುವಿನಂತಿರುವ ಮೃದುವಾದ ತೊಡೆಯುಳ್ಳವಳೇ, ಘನೇ-ದಟ್ಟವಾದ, ನಿಶೀಥೇ-ನಡುರಾತ್ರಿಯಲ್ಲಿ, ಕ್ವ-ಎಲ್ಲಿಗೆ, ಪ್ರಸ್ಥಿತಾ-ಹೊರಟವಳಾಗಿ, ಅಸಿ ಇರುವೆ? ಯತ್ರ-ಎಲ್ಲಿ, ಮೇ-ನನ್ನ, ಪ್ರಾಣಾಧಿಕಃ-ಪ್ರಾಣಕ್ಕಿಂತಲೂ ಮಿಗಿಲಾದ, ಪ್ರಿಯಃ-ಪ್ರೀತಿಗೆ ಪಾತ್ರನಾದ, ಜನಃ-ಮನುಷ್ಯನು, ವಸತಿ ಇರುವನೋ (ಅಲ್ಲಿಗೆ). ಬಾಲೇ-ಎಲೆ ತರಳೆ, ಏಕಾಕಿನೀ-ಒಬ್ಬಂಟಿಗಳಾಗಿ, ಕಥಂ-ಹೇಗೆ ತಾನೆ (ಹೋಗುವೆ?) ನೀನು, ನಬಿಭೇಷಿ-ಹೆದರುವುದಿಲ್ಲವೇ? ಪುಂಖಿತಶರಃ-ಸಜ್ಜುಗೊಳಿಸಿದ ಬಾಣವುಳ್ಳ, ಮದನಃ-ಮನ್ಮಥನು, ಸಹಾಯಃ-ನನಗೆ ಸಹಾಯಕನಾಗಿ, ಅಸ್ತಿ ನನು-ಇರುವನಲ್ಲವೇ?

'ಎಲೆ ಚೆಲುವೆ, ಕತ್ತಲಿಂದ ದಟ್ಟವಾಗಿ ಹಬ್ಬಿರುವ ಈ ನಡುರಾತ್ರಿಯಲ್ಲಿ ನೀನು ಎಲ್ಲಿಗೆ ಹೊರಟಿರುವೆ?' 'ಪ್ರಾಣಕ್ಕೂ ಮಿಗಿಲಾದ ನನ್ನ ಪ್ರಿಯನಿರುವ ಎಡೆಗೆ.' 'ಎಲೆ ಬಾಲೆ, ಏಕಾಂಗಿಯಾಗಿ ನೀನು ಅಲ್ಲಿಗೆ ಹೋಗಲು ಹೆದರುವುದಿಲ್ಲವೇ?' 'ಸಜ್ಜುಗೊಳಿಸಿದ ಬಾಣವುಳ್ಳ ಮನ್ಮಥನು ನನಗೆ ಸಹಾಯಕನಾಗಿ ಜೊತೆಯಲ್ಲಿರುವನಲ್ಲವೇ?'

೮
ಅಭಿಸಾರಿಕೆ

**ಉರಸಿ ನಿಹಿತಸ್ತಾರೋ ಹಾರಃ ಕೃತಾ ಜಘನೇ ಘನೇ**
**ಕಲಕಲವತೀ ಕಾಂಚೀ ಪಾದೌ ರಣನ್ಮಣಿನೂಪುರೌ।**
**ಪ್ರಿಯಮಭಿಸರಸ್ಯೇವಂ ಮುಗ್ಧೇ ತ್ವಮಾಹತಡಿಂಡಿಮಾ**
**ಯದಿ ಕಿಮಧಿಕತ್ರಾಸೋತ್ಕಂಪಂ ದಿಶಃ ಸಮುದೀಕ್ಷಸೇ॥**

ಮುಗ್ಧೇ ಏನೂ ತಿಳಿಯದ ಎಲೆ ಹೆಣ್ಣೆ, ತಾರಃ-ಶಬ್ದ ಮಾಡುವ, ಹಾರಃ-ಮುತ್ತಿನ ಸರವು, ಉರಸಿ-ಎದೆಯಲ್ಲಿ, ನಿಹಿತಃ-ಧರಿಸಲ್ಪಟ್ಟಿದೆ. ಘನೇ-ವಿಶಾಲವಾದ, ಜಘನೇ-ಜಘನಸ್ಥಳದಲ್ಲಿ, ಕಲಕಲವತೀ-ಕಲಕಲ ಶಬ್ದವನ್ನು ಮಾಡುವ, ಕಾಂಚೀ-ಗೆಜ್ಜೆಯ ಡಾಬು, ಕೃತಾ-ಇಡಲ್ಪಟ್ಟಿದೆ. ಪಾದೌ-ನಿನ್ನ ಕಾಲುಗಳಾದರೋ, ರಣತ್-ಧ್ವನಿಮಾಡುತ್ತಿರುವ, ಮಣಿನೂಪುರೌ-ರತ್ನಖಚಿತವಾದ ಕಾಲು ಕಡಗಗಳುಳ್ಳವುಗಳಾಗಿವೆ. ಆಹತ-ಹೊಡೆಯಲ್ಪಟ್ಟ, ಡಿಂಡಿಮಾ-ಡಿಂಡಿಮುಧ್ವನಿಯುಳ್ಳ, ತ್ವಂ-ನೀನು, ಏವಂ-ಈ ಸ್ಥಿತಿಯಲ್ಲಿ, ಪ್ರಿಯಂ-ನಿನ್ನ ನಲ್ಲನನ್ನು, ಅಭಿಸರಸಿ-ಹುಡುಕಲು ಹೊರಟಿರುವೆ. ಯದಿ-ಹೀಗಿರುವಲ್ಲಿ, ಅಧಿಕ-ಹೆಚ್ಚಾದ, ತ್ರಾಸೋತ್ಕಂಪಂ-ಭಯದಿಂದ ನಡುಗಿ ಉದ್ದೀಪಿತಳಾಗಿ, ದಿಶಃ-ಎಲ್ಲ ದಿಕ್ಕುಗಳನ್ನೂ, ಕಿಂ-ಏತಕ್ಕಾಗಿ, ಸಮುದೀಕ್ಷಸೇ-ಚೆನ್ನಾಗಿ ನೋಡುತ್ತಿರುವೆ ?

ಮುಗ್ಧೆ, ಇಂಪಾಗಿ ಶಬ್ದ ಮಾಡುವ ಮುತ್ತಿನ ಹಾರವನ್ನು ನೀನು ಎದೆಯಲ್ಲಿ ಧರಿಸಿರುವೆ. ವಿಶಾಲವಾದ ಜಘನಸ್ಥಳದಲ್ಲಿ ಕಲಕಲ ಶಬ್ದ ಮಾಡುವ ಡಾಬನ್ನು ಹಾಕಿ ಕೊಂಡಿರುವೆ. ನಿನ್ನ ಕಾಲುಗಳಲ್ಲಾದರೋ ಧ್ವನಿಮಾಡುತ್ತಿರುವ ರತ್ನ ಖಚಿತವಾದ ಕಾಲುಕಡಗಗಳಿವೆ. ಬಾರಿಸುತ್ತಿರುವ ಡಿಂಡಿಮದಿಂದ ಕೂಡಿದ ನೀನು ಈಗ ನಿನ್ನ ಪ್ರಿಯನನ್ನು ಹುಡುಕಲು ಹೊರಟಿರುವೆ. ಹೀಗಿದ್ದರೂ ಹೆದರಿಕೆಯಿಂದ ನಡುಗುತ್ತಿರುವ ನೀನು ಎಲ್ಲ ದಿಕ್ಕುಗಳನ್ನೇಕೆ ನೋಡುವೆ ?

೯

ಪ್ರಿಯೆಯಲ್ಲಿಟ್ಟಿರುವ ಪ್ರೇಮದ ಫಲವನ್ನು ಅನುಭವಿಸುವವನು ಪ್ರಿಯ.

**ಸಾ ಬಾಲಾ ವಯಮಪ್ರಗಲ್ಭಮನಸಃ ಸಾ ಸ್ತ್ರೀ**
**ವಯಂ ಕಾತರಾಃ**
**ಸಾ ಪೀನೋನ್ನತಮತ್ಪಯೋಧರಯುಗಂ ಧತ್ತೇ**
**ಸಖೇದಾ ವಯಮ್ ।**
**ಸಾಕ್ರಾಂತಾ ಜಘನಸ್ಥಲೇನ ಗುರುಣಾ ಗಂತುಂ ನ**
**ಶಕ್ತಾ ವಯಂ**

**ದೋಷೈರನ್ಯಜನಾಶ್ರಯೈರಪಟವೋ ಜಾತಾಃ ಸ್ಮ**
**ಇತ್ಯದ್ಭುತಮ್ ||**

ಸಾ–ಅವಳು, ಬಾಲಾ–ಬಾಲೆ; ಆದರೆ ವಯಂ-ನಾವು, ಅಪ್ರಗಲ್ಭ ಮನಸಃ-ಮುಗ್ಧಮನಸ್ಸುಳ್ಳವರು. ಸಾ-ಅವಳು, ಸ್ತ್ರೀ-ಹೆಣ್ಣು ಹೆಂಗಸು. ಆದರೆ ವಯಂ-ನಾವು, ಕಾತರಾಃ-ಹೆದರಿಕೆಯುಳ್ಳವರು. ಸಾ–ಅವಳು, ಪೀನ-ದಪ್ಪವೂ, ಉನ್ನತಿಮತ್-ಔನ್ನತ್ಯವುಳ್ಳುದೂ ಆಗಿರುವ, ಪಯೋಧರಯುಗಂ–ಎರಡು ಸ್ತನಗಳನ್ನು, ಧತ್ತೇ-ಹೊತ್ತಿರುವಳು. ಆದರೆ ವಯಂ-ನಾವು, ಸಖೇದಾಃ–ವ್ಯಥೆಯುಳ್ಳವರಾಗಿದ್ದೇವೆ. ಸಾ-ಅವಳು, ಗುರುಣಾ-ದಪ್ಪವಾದ, ಜಘನಸ್ಥಲೇನ-ನಿತಂಬಪ್ರದೇಶದಿಂದ, ಆಕ್ರಾಂತಾ-ಕೂಡಿರುವಳು. ಆದರೆ ವಯಂ-ನಾವು ಮಾತ್ರ, ಗಂತುಂ ನಡೆಯಲು, ನ ಶಕ್ತಾಃ-ಸಮರ್ಥರಾಗಿಲ್ಲ. ಅನ್ಯಜನಾಶ್ರಯೈಃ-ಮತ್ತೊಬ್ಬರನ್ನು ಆಶ್ರಯಿಸಿಕೊಂಡಿರುವ, ದೋಷೈಃ ದೋಷಗಳಿಂದ, (ನಾವು) ಅಪಟವಃ-ಅಸಮರ್ಥರಾಗಿ, ಜಾತಾಃ ಸ್ಮ–ಆಗಿದ್ದೇವೆ, ಇತಿ–ಹೀಗೆಂಬುದೇ, ಅದ್ಭುತಂ-ಆಶ್ಚರ್ಯವಲ್ಲವೇ ?

ಅವಳು ಬಾಲೆ; ಬಾಲೆಯಂತೆ ಮುಗ್ಧ ಮನಸ್ಸುಳ್ಳವರು ನಾವು. ಎಷ್ಟಾದರೂ ಅವಳು ಹೆಣ್ಣು ಹೆಂಗಸು; ಹೆಂಗಸರಂತೆ ಕಾತರರಾಗಿರುವವರು ನಾವು. ದಪ್ಪವೂ ಉನ್ನತವೂ ಆಗಿರುವ ಸ್ತನದ್ವಯುಗಳನ್ನು ಹೊತ್ತಿರುವವಳು ಅವಳು; ಆದರೆ ಆ ಭಾರದ ವ್ಯಥೆಯನ್ನು ಅನುಭವಿಸತಕ್ಕವರು ನಾವು. ಅವಳೋ ದಪ್ಪವಾದ ಜಘನಸ್ಥಳವನ್ನು ಹೊಂದಿದ್ದಾಳೆ; ಆದರೆ ಭಾರದಿಂದ ನಡೆಯಲು ಅಸಮರ್ಥರಾಗಿರುವವರು ನಾವು. ಹೀಗೆ ಮತ್ತೊಬ್ಬರಲ್ಲಿರುವ ದೋಷಗಳಿಂದ ನಾವು ಅಸಮರ್ಥರೆನಿಸಿಕೊಂಡಿರುವುದು ಆಶ್ಚರ್ಯವಲ್ಲವೆ ?

## ೧೦

### ಹೊಸ ಸೊಸೆ

**ಪಟಾಲಗ್ನೇ ಪತ್ಯೌ ನಮಯತಿ ಮುಖಂ ಜಾತವಿನಯಾ**
**ಹಠಾಶ್ಲೇಷಂ ವಾಂಛತ್ಯಪಹರತಿ ಗಾತ್ರಾಣಿ ನಿಭೃತಮ್ ।**

**ನ ಶಕ್ನೋತ್ಯಾಖ್ಯಾತುಂ ಸ್ಮಿತಮುಖಸಖೀದತ್ತನಯನಾ**
**ಹ್ರಿಯಾ ತಾಮ್ಯತ್ಯಂತಃ ಪ್ರಥಮಪರಿಹಾಸೇ ನವವಧೂಃ॥**

ಪತ್ಯಾ-ಪ್ರಿಯನು, ಪಟಾಲಗ್ನೇ-ಸೀರೆಯನ್ನು ಬಲಾತ್ಕಾರವಾಗಿ ಹಿಡಿದೆಳೆಯಲು, ಜಾತ-ಉಂಟಾದ, ವಿನಯಾ-ನಮ್ರತೆಯುಳ್ಳವಳಾಗಿ ಎಂದರೆ ನಾಚಿಕೆಯಿಂದ, ನಮಯತಿ-(ಮುಖವನ್ನು)ತಗ್ಗಿಸುತ್ತಾಳೆ. ಹಠಾಶ್ಲೇಷಂ-ಬಲಾತ್ಕಾರದಿಂದ ಅಪ್ಪುಗೆಯನ್ನು, ವಾಂಛತಿ ಅವನು-ಬಯಸಿದಾಗ, ಗಾತ್ರಾಣಿ-ತನ್ನ ಅವಯವಗಳನ್ನು, ನಿಭೃತಂ-ಅಡ್ಡವಾಗುವಂತೆ, ಅಪಹರತಿ-ಬೇರೆ ಕಡೆ ತಿರುಗಿಸುವಳು. ಆಖ್ಯಾತುಂ-ಪ್ರಿಯನ ಪ್ರಶ್ನೆಗಳಿಗೆ ಉತ್ತರಕೊಡಲು,ನಶಕ್ನೋತಿ-ಧೈರ್ಯಸಾಲದಾಗುವಳು. ಸ್ಮಿತಮುಖ ನಗುಮುಖದಿಂದ ಕೂಡಿ, ಸಖೀ-ಗೆಳತಿಯ ಕಡೆಗೆ, ದತ್ತ-ಇಡಲ್ಪಟ್ಟ, ನಯನಾ-ಕಣ್ಣುಗಳುಳ್ಳವಳಾಗಿ, ನವವಧೂಃ-ಹೊಸದಾಗಿ ಮನೆಗೆ ಬಂದ ಹುಡುಗಿ, ಪ್ರಥಮಪರಿಹಾಸೇ-ಮೊದಲಬಾರಿಯ ಹಾಸ್ಯದ ಮಾತಿನಲ್ಲಿ, ಅಂತಃ-ಮನಸ್ಸಿನಲ್ಲಿಯೇ, ಹ್ರಿಯಾ-ನಾಚಿಕೆಯಿಂದ, ತಾಮ್ಯತಿ-ಬಳಲುತ್ತಾಳೆ.

ಪ್ರಿಯನು ಬಲಾತ್ಕಾರದಿಂದ ಸೀರೆಯನ್ನು ಹಿಡಿದೆಳೆಯಲು, ಹೊಸದಾಗಿ ಮನೆಗೆ ಬಂದ ಹೆಣ್ಣು ನಾಚಿ ಮುಖ ತಗ್ಗಿಸುವಳು. ನಲ್ಲನು ಬಲಾತ್ಕಾರವಾಗಿ ಅವಳನ್ನು ಅಪ್ಪಲು ಬಯಸಿದಾಗ ಆ ಕೆಲಸಕ್ಕೆ ತನ್ನ ಅವಯವಗಳು ಅಡ್ಡಿ ಬರುವಂತೆ ಅವುಗಳನ್ನು ಬೇರೆಡೆಗೆ ತಿರುಗಿಸುವಳು. ಪ್ರಿಯನ ಪ್ರಶ್ನೆಗಳಿಗೆ ಉತ್ತರಕೊಡಲು ಧೈರ್ಯಸಾಲದಿರುವಾಗ ನಗುಮುಖದಿಂದ ತನ್ನ ಗೆಳತಿಯ ಕಡೆಗೆ ಕಣ್ಣು ತಿರುಗಿಸುವಳು. ಹೀಗೆ ಹೊಸದಾಗಿ ಮನೆಗೆ ಬಂದ ಹೆಣ್ಣು ಪ್ರಿಯನು ಮಾಡುವ ಮೊದಲ ಬಾರಿಯ ಹಾಸ್ಯದಲ್ಲಿ, ಮನಸ್ಸಿನಲ್ಲಿಯೇ ನಾಚಿಕೆಯಿಂದ ಪ್ರಿಯನನ್ನು ತಣಿಸಲು ಅಸಮರ್ಥಳಾಗಿ ಬಳಲುತ್ತಾಳೆ.

## ೧೧

### ಪಶ್ಚಾತ್ತಾಪ

**ಶ್ಲಿಷ್ಟಃ ಕಂಠೇ ಕಿಮಿತಿ ನ ಮಯಾ ಮೂಢಯಾ ಪ್ರಾಣನಾಥ**
**ಶ್ಚುಂಬತ್ಯಸ್ಮಿನ್ವದನವಿನತಿಃ ಕಿಂ ಕೃತಾ ಕಿಂ ನ ದೃಷ್ಟಃ।**

**ನೋಕ್ತಃ ಕಸ್ಮಾದಿತಿ ನವವಧೂಚೇಷ್ಟಿತಂ ಚಿಂತಯಂತೀ**
**ಪಶ್ಚಾತ್ತಾಪಂ ವಹತಿ ತರುಣೀ ಪ್ರೇಮ್ಣಿ ಜಾತೇ ರಸಜ್ಞಾ॥**

ಮೂಢಯಾ-ಅಜ್ಞಾನಿಯಾದ, ಮಯಾ-ನನ್ನಿಂದ, ಕಿಮಿತಿ-ಏತಕ್ಕಾಗಿ, ಪ್ರಾಣನಾಥಃ-ಪ್ರಾಣಪ್ರಿಯನು, ಕಂಠೇ-ಕತ್ತಿನಲ್ಲಿ, ನಶ್ಲಿಷ್ಟಃ-ಆಲಿಂಗಿಸಿಕೊಳ್ಳಲ್ಪಡಲಿಲ್ಲ? ಅಸ್ಮಿನ್-ಈ ನನ್ನ ಪ್ರಿಯತಮನು, ಚುಂಬತಿ (ಸತಿ)-ಮುತ್ತಿಡಲು ಯತ್ನಿಸಿದಾಗ,ಕಿಂ-ಏತಕ್ಕಾಗಿ, ವದನವಿನತಿಃ-ಮುಖ ತಿರುಗಿಸುವ ಕೆಲಸವು, ಕೃತಾ-ಮಾಡಲ್ಪಟ್ಟಿತು? ಕಿಂ-ಏತಕ್ಕಾಗಿ, ನ ದೃಷ್ಟಃ-(ಪ್ರಿಯತಮನು ಚೆನ್ನಾಗಿ) ನೋಡಲ್ಪಡಲಿಲ್ಲ? ಕಸ್ಮಾತ್-ಯಾವ ಕಾರಣದಿಂದ, ನ ಉಕ್ತಃ-ಮಾತನಾಡಲ್ಪಡಲಿಲ್ಲ? ಇತಿ-ಹೀಗೆಂದು, ನವವಧೂಚೇಷ್ಟಿತಂ-ಪ್ರಾರಂಭದ ಪ್ರಿಯತಮನ ಸಮಾಗಮದ ಸನ್ನಿವೇಶವನ್ನು, ಚಿಂತಯಂತೀ ಆಲೋಚಿಸುತ್ತ, ಜಾತೇ-ತನಗುಂಟಾಗಿರುವ, ಪ್ರೇಮ್ಣಿ-ಅನುರಾಗದಲ್ಲಿ, ರಸಜ್ಞಾ-ರಸಾಸ್ವಾದನವ ರುಚಿಯನ್ನು ಕಂಡ, ತರುಣೀ-ಯುವತಿಯು, ಪಶ್ಚಾತ್ತಾಪಂ-ಸಂತಾಪವನ್ನು, ವಹತಿ-ಹೊಂದುತ್ತಾಳೆ.

ಮೂಢಳಾಗಿ ನಾನು ಪ್ರಿಯತಮನ ಕತ್ತನ್ನೇಕೆ ಅಪ್ಪಿಕೊಳ್ಳಲಿಲ್ಲ? ನಲ್ಲನು ಮುತ್ತಿಡಲು ಯತ್ನಿಸಿದಾಗ ಮುಖವನ್ನೇಕೆ ಅತ್ತಕಡೆ ತಿರುಗಿಸಿದೆ? ಕಣ್ತುಂಬ ಇನಿಯನನ್ನು ನೋಡಲಿಲ್ಲವಲ್ಲ! ಯಾವ ಕಾರಣಕ್ಕಾಗಿ ನಾನು ಅವನೊಡನೆ ಮಾತನಾಡಲಿಲ್ಲ? ಹೀಗೆಂದುಕೊಳ್ಳುತ್ತ ಪ್ರಿಯತಮನ ಪ್ರಥಮಸಮಾಗಮದ ಸನ್ನಿವೇಶವನ್ನು ಚಿಂತಿಸುತ್ತ, ಪ್ರೇಮದ ಸವಿಯನ್ನು ಸವಿದ ತರುಣಿ ಪಶ್ಚಾತ್ತಾಪವನ್ನು ಹೊಂದುವಳು.

೧೨

ಪ್ರೇಮದ ಔನ್ನತ್ಯ

**ಮುಗ್ಧೇ ಮುಗ್ಧತಯೈವ ನೇತುಮಖಿಲಃ ಕಾಲಃ ಕಿಮಾರಭ್ಯತೇ**
**ಮಾನಂ ಧತ್ಸ್ವ ಧೃತಿಂ ಬಧಾನ ಋಜುತಾಂ ದೂರೇ ಕುರು**
**ಪ್ರೇಯಸಿ।**

**ಸಖ್ಯೈವಂ ಪ್ರತಿಬೋಧಿತಾ ಪ್ರತಿವಚಸ್ತಾಮಾಹ ಭೀತಾನನಾ
ನೀಚೈಃ ಶಂಸ ಹೃದಿ ಸ್ಥಿತೋ ಹಿ ನನು ಮೇ ಪ್ರಾಣೇಶ್ವರಃ
ಶ್ರೋಷ್ಯತಿ ॥**

ಮುಗ್ಧೇ, ಮುಗ್ಧತಯಾ ಏವ-ಕೇವಲ ಮುಗ್ಧತೆಯಿಂದಲೇ, ಅಖಿಲಃ ಎಲ್ಲ, ಕಾಲಃ-ಕಾಲವು, ನೇತುಂ ಕಳೆಯಲ್ಪಡುವುದಕ್ಕೆ, ಆರಭ್ಯತೇ ಕಿಂ ಪ್ರಾರಂಭಿಸಲ್ಪಡುವುದೇನು? (ಹಾಗಾಗಬಾರದಾಗಿ ನೀನು) ಮಾನಂ-ಪ್ರಣಯಕೋಪವನ್ನು, ಧತ್ಸ್ವ-ಧರಿಸು. ಧೃತಿಂ-ಧೈರ್ಯವನ್ನು, ಬಧಾನ-ಅವಲಂಬಿಸು. ಪ್ರೇಯಸಿ-ನಿನ್ನ ಪ್ರಿಯನಲ್ಲಿ, ಋಜುತಾಂ-ಸರಳತೆಯನ್ನು, ದೂರೇ ಕುರು-ದೂರ ಮಾಡು. ಏವಂ-ಈ ರೀತಿಯಲ್ಲಿ, ಸಖ್ಯಾ-ಗೆಳತಿಯಿಂದ, ಪ್ರತಿಬೋಧಿತಾ-ಎಚ್ಚರಿಸಲ್ಪಟ್ಟವಳಾಗಿ, ಭೀತಾನನಾ-ಹೆದರಿದ ಮುಖವುಳ್ಳ, ಮುಗ್ಧೆ, 'ಎಲೆ ಗೆಳತಿ, ನೀಚೈಃ-ಮೆಲ್ಲಗೆ, ಶಂಸ-ಹೇಳು. ಹೃದಿ-ನನ್ನ ಹೃದಯದಲ್ಲಿ, ಮೇ-ನನ್ನ, ಪ್ರಾಣೇಶ್ವರಃ-ಪ್ರಿಯನು, ಸ್ಥಿತೋ ಹಿ-ಇರುವನಷ್ಟೆ. (ಆ ನನ್ನ ಇನಿಯನು ಈ ನಿನ್ನ ಮಾತನ್ನು,) ಶ್ರೋಷ್ಯತಿ ನನು-ಕೇಳಿಯಾನು!'

"ಮುಗ್ಧೇ, ಕೇವಲ ಮುಗ್ಧತೆಯಿಂದಲೇ ನಿನ್ನ ಕಾಲವೆಲ್ಲವನ್ನೂ ಕಳೆಯ ಬಯಸುವೆಯೇನು? ಹಾಗೆ ಮಾಡಬೇಡ. ಆದ್ದರಿಂದ ನೀನು ನಿನ್ನ ಇನಿಯನಲ್ಲಿ ಪ್ರಣಯಕೋಪವನ್ನು ತೋರು. ಧೈರ್ಯವನ್ನು ಅವಲಂಬಿಸು. ಸರಳತೆಯನ್ನು ದೂರಮಾಡು." ಹೀಗೆ ಗೆಳತಿಯಿಂದ ಎಚ್ಚರಿಸಲ್ಪಟ್ಟರೂ ಹೆದರಿದ ಮುಖವುಳ್ಳ ಆ ಮುಗ್ಧೆ ತನ್ನ ಗೆಳತಿಗೆ ಈ ರೀತಿ ನುಡಿದಳು. "ಗೆಳತಿ, ಮೆಲ್ಲನೆ ನುಡಿ. ನನ್ನ ಹೃದಯದಲ್ಲಿರುವ ಆ ನನ್ನ ನಲ್ಲನಿಗೆ ಈ ನಿನ್ನ ನುಡಿ ಕೇಳಿಸೀತು!"

೧೬

ಸುಂದರನನ್ನು ಸುಂದರಿಯರು ಅಪಹರಿಸುವರು

**ನಾರ್ಯೋ ಮುಗ್ಧಶಠಾ ಹರಂತಿ ರಮಣಂ ತಿಷ್ಠಂತಿ ನೋ
ವಾರಿತಾ
ಸ್ತತ್ಕಿಂ ತಾಮ್ಯಸಿ ಕಿಂ ಚ ರೋದಿಷಿ ಮುಧಾ ತಾಸಾಂ ಪ್ರಿಯಂ
ಮಾ ಕೃಥಾಃ**

**ಕಾಂತಃ ಕೇಲಿರುಚಿರ್ಯುವಾ ಸಹೃದಯಸ್ತಾದೃಕ್ಪತಿಃ ಕಾತರೇ
ಕಿಂ ನೋ ಬರ್ಬರಕರ್ಕಶೈಃ ಪ್ರಿಯಶತೈರಾಕ್ರಮ್ಯ ವಿಕ್ರೀಯತೇ||**

ಹೇ ಕಾತರೇ-ಎಲೌ ಲಜ್ಜಾವತಿಯಾದ ಭೀರುವೇ, ನಾರ್ಯಃ-ಹೆಂಗಸರು, (ಸಾಮಾನ್ಯವಾಗಿ) ಮುಗ್ಧಶಠಾಃ-ಮುಗ್ಧರಂತೆ ಕಂಡುಬಂದರೂ ಸ್ವಾಭಾವಿಕವಾಗಿ ಮೋಸಗಾರರು. ರಮಣಂ-ಅವರು ನಿನ್ನ ಪ್ರಿಯತಮನನ್ನು, ಹರಂತಿ-ಅಪಹರಿಸುತ್ತಾರೆ. ವಾರಿತಾಃ-ನಿನ್ನಿಂದ ಎಷ್ಟೇ ತಡೆಯಲ್ಪಟ್ಟರೂ, ನೋ ತಿಷ್ಠಂತಿ- ನಿಲ್ಲುವುದಿಲ್ಲ. ತತ್-ಆದಕಾರಣ, ಕಿಂ-ಏತಕ್ಕಾಗಿ, ತಾಮ್ಯಸಿ-ದುಃಖದಿಂದ ಬಳಲುವೆ? ಮುಧಾ-ವ್ಯರ್ಥವಾಗಿ, ಕಿಂ ಚ-ಏತಕ್ಕಾಗಿ, ರೋದಿಷಿ-ಅಳುತ್ತಿರುವೆ? ತಾಸಾಂ-(ನಿನ್ನ ಪ್ರಿಯತಮನನ್ನು ಅಪಹರಿಸಲು ಯತ್ನಿಸುವ) ಆ ಸ್ತ್ರೀಯರಿಗೆ, ಪ್ರಿಯಂ-ಹಿತವನ್ನು, ಮಾ ಕೃಥಾಃ ಮಾಡಬೇಡ. (ಏಕೆಂದರೆ) ತಾದೃಕ್ಪತಿಃ-ಆ ತೆರನಾದ ನಿನ್ನ ಗಂಡನು, ಕಾಂತಃ ಸುಂದರನು. ಕೇಲಿರುಚಿಃ-ಭೋಗಾಸಕ್ತಿಯುಳ್ಳವನು. ಯುವಾ-ತರುಣನು. ಹಾಗೂ ಸಹೃದಯಃ-ರಸಜ್ಞನು. (ಈ ಗುಣಗಳಿಂದ ಕೂಡಿದ ನಿನ್ನ ಇನಿಯನು) ಪ್ರಿಯಶತೈಃ-ಅನೇಕ ಪ್ರೀತಿಯುಕ್ತವಾದ, ಬರ್ಬರಕರ್ಕಶೈಃ-ಕಠಿಣವಾದ ಹಾಗೂ ಭಾವಗರ್ಭಿತವಾದ ಮಾತುಗಳಿಂದ, ಆಕ್ರಮ್ಯ ವಶಪಡಿಸಿಕೊಂಡು, ಕಿಂ-ಏತಕ್ಕಾಗಿ, (ನಿನ್ನಿಂದ) ನೋ ವಿಕ್ರಿಯತೇ-ಕೊಳ್ಳಲ್ಪಡುವುದಿಲ್ಲ?

ಲಜ್ಜಾವತಿಯೂ ಸ್ವಭಾವ ಭೀರುವೂ ಆದ ಎಲೆ ಹೆಣ್ಣೆ! ಹೆಂಗಸರು ಸಾಮಾನ್ಯವಾಗಿ ಮುಗ್ಧರಂತೆ ಕಂಡುಬಂದರೂ ಸ್ವಾಭಾವಿಕವಾಗಿ ಮೋಸಗಾರರು. ಅವರು ನಿನ್ನ ಪ್ರಿಯತಮನನ್ನು ಅಪಹರಿಸುತ್ತಾರೆ. ನೀನು ಎಷ್ಟೇ ಪ್ರಯತ್ನಿಸಿದರೂ ಅದನ್ನು ತಡೆಗಟ್ಟುವುದು ಅಸಾಧ್ಯ. ಆದಕಾರಣ ದುಃಖದಿಂದೇಕೆ ತೊಳಲುವೆ? ವ್ಯರ್ಥವಾಗಿ ಏಕೆ ಅಳುವೆ? ನಿನ್ನ ಪ್ರಿಯತಮನ ಮನಸ್ಸನ್ನು ಸೆಳೆಯಲು ಯತ್ನಿಸುವ ಆ ಸ್ತ್ರೀಯರಿಗೆ ಹಿತವನ್ನು ಬಯಸಬೇಡ. ನಿನ್ನ ಪ್ರಿಯತಮನಾದರೋ ಸುಂದರ; ಭೋಗಾಸಕ್ತಿಯುಳ್ಳವನು; ರಸಜ್ಞ. ಹೀಗಿರುವ ಆ ನಿನ್ನ ಪ್ರಿಯತಮನನ್ನು ಪ್ರೀತಿಯುಕ್ತವೂ ಭಾವಗರ್ಭಿತವೂ ಆದ ಮಾತುಗಳಿಂದ ಏಕೆ ವಶಪಡಿಸಿಕೊಳ್ಳುವುದಿಲ್ಲ?

## ೧೪

ಪ್ರಿಯೆಯಿಂದ ಶಿಕ್ಷೆ ಪಡೆಯುವವನೇ ಧನ್ಯ

**ಕೋಪಾತ್ಕೋಮಲಲೋಲಬಾಹುಲತಿಕಾಪಾಶೇನ ಬಧ್ವಾ ದೃಢಂ**
**ನೀತ್ವಾ ವಾಸನಿಕೇತನಂ ದಯಿತಯಾ ಸಾಯಂಸಖೀನಾಂ ಪುರಃ।**
**ಭೂಯೋಽಪ್ಯೇವಮಿತಿ ಸ್ಖಲನ್ಮೃದುಗಿರಾ ಸಂಸೂಚ್ಯ ದುಶ್ಚೇಷ್ಟಿತಂ**
**ಧನ್ಯೋಽಹನ್ಯತ ಏವ ನಿಹ್ನುತಿಪರಃಪ್ರೇಯಾನ್‌ರುದತ್ಯಾಹಸನ್॥**

ರುದತ್ಯಾ–ಅಳುತ್ತಿರುವ, ದಯಿತಯಾ–ಪ್ರಿಯೆಯಿಂದ, ಪ್ರೇಯಾನ್–ಪ್ರಿಯನು, ನಿಹ್ನುತಿಪರಃ–ಕೋಪಕ್ಕೆ ಈಡಾಗಿ, ಹಸನ್–ನಗುತ್ತ, ಕೋಪಾತ್–ಪ್ರಣಯಕೋಪದಿಂದ, ಕೋಮಲ-ಮೃದುವಾದ, ಲೋಲ-ಚಂಚಲವಾದ, ಬಾಹುಲತಿಕಾ–ಲತೆಯಂತಿರುವ ತೋಳುಗಳೆಂಬ, ಪಾಶೇನ-ಹಗ್ಗದಿಂದ, ದೃಢಂ-ಗಟ್ಟಿಯಾಗಿ, ಬಧ್ವಾ-ಕಟ್ಟಿ, ವಾಸನಿಕೇತನಂ–ತನ್ನ ವಾಸಸ್ಥಳವನ್ನು, ನೀತ್ವಾ–ಹೊಂದಿಸಿ, ಸಾಯಂ-ಸಾಯಂಕಾಲದ ವೇಳೆಯಲ್ಲಿ, ಸಖೀನಾಂ–ತನ್ನ ಗೆಳತಿಯರ, ಪುರಃ-ಮುಂಭಾಗದಲ್ಲಿ, ಭೂಯೋಽಪಿ-ಮತ್ತೆ ಮತ್ತೆ ಏವಂ-ಹೀಗೆಯೇ (ನಡೆಯುವೆಯಾ) ಇತಿ–ಹೀಗೆಂದು ನುಡಿಯುತ್ತ, ಸ್ಖಲತ್-ತೊದಲುವ, ಮೃದು-ಮೃದುವಾದ, ಗಿರಾ-ನುಡಿಯಿಂದ, ದುಶ್ಚೇಷ್ಟಿತಂ-ನಲ್ಲನ ಕೆಟ್ಟ ನಡೆಯನ್ನು, ಸಂಸೂಚ್ಯ–ಸೂಚನೆ ಮಾಡುತ್ತ, ಹನ್ಯತ ಏವ-(ಆಟದ ತಾವರೆ ಮೊದಲಾದ ಸಾಧನಗಳಿಂದ) ಹೊಡೆಯಲ್ಪಡುವವನೇ ಧನ್ಯಃ-ಧನ್ಯನು.

ಪ್ರಣಯ ಕೋಪದಿಂದ ಕೂಡಿ ಅಳುತ್ತಿರುವ ಪ್ರಿಯೆ ಬಳ್ಳಿಯಂತಿರುವ ತನ್ನೆರಡು ಬಾಹು ಪಾಶಗಳಿಂದ ನಗುತ್ತಿರುವ ತನ್ನ ಪ್ರಿಯತಮನನ್ನು ಬಿಗಿಯಾಗಿ ಕಟ್ಟಿ ತನ್ನ ಅಂತಃಪುರಕ್ಕೆ ಅವನನ್ನು ಕೊಂಡೊಯ್ದು ಸಂಜೆ ಸಖಿಯರ ಮುಂದೆ 'ಮತ್ತೆ ಹೀಗೆಯೇ ತಾನೆ' ಎಂದು ತೊದಲುವ ಮೃದುನುಡಿಗಳಿಂದ ಅವನ ಕೆಟ್ಟ ನಡತೆಯನ್ನು ಸೂಚಿಸಿ ಆಟದ ತಾವರೆ ಮುಂತಾದ ಸಾಧನೆಗಳಿಂದ ಹೊಡೆಯುವಳು. ಹಾಗೆ ತನ್ನ ಪ್ರಿಯೆಯಿಂದ ಶಿಕ್ಷೆ ಪಡೆಯುವವನೇ ಧನ್ಯ.

೧೫

ಮಾನನಾಶ

**ಏಕಸ್ಮಿನ್ ಶಯನೇ ಪರಾಙ್ಮುಖತಯಾ ವೀತೋತ್ತರಂ ತಾಮ್ಯತೋ-**
**ರನ್ಯೋನ್ಯಂ ಹೃದಯಸ್ಥಿತೇಽಪ್ಯನುನಯೇ ಸಂರಕ್ಷತೋ ಗೌರವಮ್ ।**
**ದಂಪತ್ಯೋಃ ಶನಕೈರಪಾಂಗವಲನಾನ್ಮಿಶ್ರೀಭವಚ್ಚಕ್ಷುಷೋ-**
**ರ್ಭಗ್ನೋ ಮಾನಕಲಿಃ ಸಹಾಸರಭಸಂ ವ್ಯಾವೃತ್ತಕಂಠಗ್ರಹಃ ॥**

ಏಕಸ್ಮಿನ್-ಒಂದೇ, ಶಯನೇ ಹಾಸಿಗೆಯಲ್ಲಿ, ದಂಪತ್ಯೋಃ ನಲ್ಲನಲ್ಲಯರು, ಅನ್ಯೋನ್ಯಂ-ಪರಸ್ಪರವಾಗಿ, ಅನುನಯೇ-ಅನುರಾಗವು, ಹೃದಯಸ್ಥಿತೇ ಅಪಿ-ಮನಸ್ಸಿನಲ್ಲಿದ್ದರೂ, ಗೌರವಂ-ಆತ್ಮಗೌರವವನ್ನು, ಸಂರಕ್ಷತೋಃ-ಕಾಪಾಡಿಕೊಳ್ಳುತ್ತ, ಪರಾಙ್ಮುಖತಯಾ ಒಬ್ಬರಿಗೊಬ್ಬರು ಎದುರಾಗದೆ, ವೀತೋತ್ತರಂ-ಉಕ್ತಿ ಪ್ರತ್ಯುಕ್ತಿಗಳನ್ನು ಬಿಟ್ಟು, ತಾಮ್ಯತೋಃ-ಬಳಲುತ್ತಿರಲಾಗಿ, ಶನಕೈಃ-ಮೆಲ್ಲಮೆಲ್ಲನೆ, ಅಪಾಂಗಚಲನಾತ್-ಆನಲ್ಲನಲ್ಲೆಯರ ಕಡೆಗಣ್ಣಿನ ಚಲನೆಯಿಂದ, ಮಿಶ್ರೀಭವಚ್ಚಕ್ಷುಷೋಃ-ಒಂದಾಗಿ ಕೂಡಿದ ಕಣ್ಣುಳ್ಳವರಾಗಲು, ವ್ಯಾವೃತ್ತ-ಹಿಂದಿರುಗಿದ ಎಂದರೆ ತಿರುಗಿಸಿದ, ಕಂಠಗ್ರಹಃ-ಕತ್ತಿನ ಅಪ್ಪುಗೆಯುಳ್ಳ, ಮಾನಕಲಿಃ-ಕೋಪವೆಂಬ ದುಷ್ಟನು, ಸಹಾಸರಭಸಂ-ವೇಗವಾದ ನಗೆಯಿಂದ, ಕೂಡಿ, ಭಗ್ನಃ-ನಾಶಗೊಳಿಸಲ್ಪಟ್ಟನು.

ಹೃದಯದಲ್ಲಿ ತುಂಬ ಅನುರಾಗವನ್ನು ಹೊಂದಿದ ನಲ್ಲನಲ್ಲೆಯರು ಒಂದೇ ಹಾಸಿಗೆಯಲ್ಲಿ ಮಲಗಿ ಆತ್ಮಗೌರವವನ್ನು ಕಾಪಾಡಿಕೊಳ್ಳುವುದರ ಸಲುವಾಗಿ ಒಬ್ಬರೊಬ್ಬರು ಎದುರಾಗದೆ, ಉಕ್ತಿ ಪ್ರತ್ಯುಕ್ತಿಗಳನ್ನು ಬಿಟ್ಟು ಬಳಲಿ ಕೊಳಲುತ್ತಿದ್ದರು. ಹೀಗಿರಲು ಮೆಲ್ಲಮೆಲ್ಲನೆ ಪರಸ್ಪರವಾಗಿ ತಿಳಿಯದಂತೆ ನೋಡುವಾಗ ಆ ನಲ್ಲನಲ್ಲೆಯರ ಕಡೆಗಣ್ಣಿನ ಚಲನೆಯಿಂದ ಅವರ ಕಣ್ಣುಗಳು ಒಂದಾದವು. ಆಗ ತಿರುಗಿಸಿದ ಕತ್ತಿನ ಅಪ್ಪುಗೆಯಿಂದ ಕೋಪವೆಂಬ ದುಷ್ಟನು ಆ ದಂಪತಿಗಳ ನಗೆಯಿಂದ ನಾಶವಾದನು.

೧೬

ಮೂಕನೋವು

**ಚರಣಪತನಪ್ರತ್ಯಾಖ್ಯಾನಪ್ರಸಾದಪರಾಙ್ಮುಖೇ**
**ನಿಭೃತಕಿತವಾಚಾರೇತ್ಯುಕ್ತೇ ರುಷಾ ಪರುಷೀಕೃತೇ ।**
**ವ್ರಜತಿ ರಮಣೇ ನಿಃಶ್ವಸ್ಯೋಚ್ಚೈಃ ಸ್ತನಾರ್ಪಿತ ಹಸ್ತಯಾ**
**ನಯನಸಲಿಲಚ್ಛನ್ನಾ ದೃಷ್ಟಿಃ ಸಖೀಷು ನಿಪಾತಿತಾ ॥**

ಚರಣ-ಕಾಲಿಗೆ, ಪತನ–ಬೀಳುವಿಕೆಯ, ಪ್ರತ್ಯಾಖ್ಯಾನ-ತಿರಸ್ಕಾರದಿಂದ, ಪರಾಙ್ಮುಖೇ-ಹಿಂದಿರುಗಿದ, ರಮಣೇ-ನಲ್ಲನು, ನಿಭೃತ ಗೂಢವಾದ, ಕಿತವ-ಮೋಸದಿಂದ ಕೂಡಿದ, ಆಚಾರ ನಡತೆಯುಳ್ಳವನೇ, ಇತಿ ಹೀಗೆಂದು, ಉಕ್ತೇ- ಹೇಳಲ್ಪಡಲು, ರುಷಾ-ಕೋಪದಿಂದ, ಪರುಷೀಕೃತೇ ಕಠಿಣಹೃದಯನಾಗಿಮಾಡಲ್ಪಟ್ಟು, ವ್ರಜತಿ (ಸತಿ)-ಹೊರಟುಹೋಗಲು, ಉಚ್ಚೈಃ ಗಟ್ಟಿಯಾಗಿ, ನಿಃಶ್ವಸ್ಯ-ನಿಟ್ಟುಸಿರುಬಿಟ್ಟು, ಸ್ತನಾರ್ಪಿತ ಹಸ್ತಯಾ-ತನ್ನೆರಡು ಸ್ತನಗಳ ಮೇಲಿಟ್ಟ ಕೈಗಳುಳ್ಳ, (ನಾಯಿಕೆಯಿಂದ) ನಯನಸಲಿಲಚ್ಛನ್ನಾ–ಕಣ್ಣೀರಿನಿಂದ ತುಂಬಿದವಳಾಗಿ, ಸಖೀಷು–ತನ್ನ ಗೆಳತಿಯರಲ್ಲಿ, ದೃಷ್ಟಿಃ-ನೋಟವು, ನಿಪಾತಿತಾ-ಇಡಲ್ಪಟ್ಟಿತು.

ನಲ್ಲನು ಕಾಲಿಗೆ ಬಿದ್ದಾಗ ಪ್ರಿಯಳು ಅವನ ಅನುನಯವನ್ನು ತಿರಸ್ಕರಿಸಿದಳು. 'ನೀನು ಕಪಟಿ, ಮೋಸಗಾರ' ಎಂದು ನಿಷ್ಠುರವಾಗಿ ನುಡಿದಳು. ಪ್ರಿಯಳ ವರ್ತನೆಯಿಂದ ಕೋಪಗೊಂಡು ಕಠಿಣಹೃದಯನಾದ ನಲ್ಲನು ಹೊರಟುಹೋಗಲು ಗಟ್ಟಿಯಾಗಿ ನಿಟ್ಟುಸಿರು ಬಿಟ್ಟು, ತನ್ನೆರಡು ಸ್ತನಗಳ ಮೇಲೆ ಕೈಯನ್ನಿಟ್ಟು, ಕಣ್ಣೀರಿನಿಂದ ತುಂಬಿದ ಕಣ್ಣಿನಿಂದ ನಾಯಿಕೆ, ಸಖಿಯರನ್ನು ನೋಡಿದಳು.

೧೭

ಬುದ್ಧಿವಾದ

**ಚಪಲಹೃದಯೇ ಕಿಂ ಸ್ವಾತಂತ್ರ್ಯಾತ್ತಥಾ ಗೃಹಮಾಗತ**
**ಶ್ಚರಣಪತಿತಃ ಪ್ರೇಮಾದ್ರಾರ್ದ್ರಃ ಪ್ರಿಯಃ ಸಮುಪೇಕ್ಷಿತಃ ।**

**ತದಿದಮಧುನಾ ಯಾವಜ್ಜೀವಂ ನಿರಸ್ತಸುಖೋದಯಾ**
**ರುದಿತಶರಣಾ ದುರ್ಜಾತಾನಾಂ ಸಹಸ್ವ ರುಷಾಂ ಫಲಮ್ ||**

ಚಪಲಹೃದಯೇ-ಎಲೆ ಚಂಚಲಮನಸ್ಸಿನವಳೇ, ತಥಾ ಆ ರೀತಿ, ಗೃಹಂ-ನಿನ್ನ ಮನೆಯನ್ನು ಕುರಿತು, ಆಗತಃ-ಬಂದ, ಚರಣಪತಿತಃ ಕಾಲಿಗೆಬಿದ್ದು ನಮಸ್ಕರಿಸಿದ, ಪ್ರೇಮಾದ್ರ+ಆರ್ದ್ರಃ-ಪ್ರೇಮದಿಂದ ಕರಗಿದ ಮನಸ್ಸುಳ್ಳ, ಪ್ರಿಯಃ-ಇನಿಯನು, ಸ್ವಾತಂತ್ರ್ಯಾತ್-ಯಾರನ್ನೂ ಕೇಳದೆ (ಸ್ವೇಚ್ಛೆಯಿಂದ), ಸಮುಪೇಕ್ಷಿತಃಕಿಂ ತಿರಸ್ಕರಿಸಲ್ಪಟ್ಟನಲ್ಲವೆ? ತತ್-ಆದ್ದರಿಂದ, ಇದಂ-ಈ, ದುರ್ಜಾತಾನಾಂ-ದುಃಖದಿಂದ ಉಂಟಾದ, ರುಷಾಂ-ಕೋಪದ, ಫಲಂ-ಫಲವನ್ನು, ಅಧುನಾ-ಈಗ, ಯಾವಜ್ಜೀವಂ-ಬದುಕಿರುವವರೆಗೂ, ನಿರಸ್ತ-ಕಳೆದುಕೊಂಡ, (ಅಸ್ತವಾದ ಎಂದರೆ ಮರೆಯಾದ,) ಸುಖೋದಯಾ-ಸುಖದ ಏಳಿಗೆಯುಳ್ಳವಳಾಗಿ ರುದಿತ ಶರಣಾ-ಅಳುವನ್ನೇ ಮುಖ್ಯ ರಕ್ಷಣೆಯನ್ನಾಗಿ ಮಾಡಿಕೊಂಡು, ಸಹಸ್ವ-ಸಹಿಸಿಕೊ.

ಚಪಲಹೃದಯದ ಹೆಣ್ಣೆ, ಮನೆಗೆ ಬಂದು ಕಾಲಿಗೆರಗಿದ ಪ್ರೇಮಪೂರ್ಣವಾದ ಹೃದಯವುಳ್ಳ ಇನಿಯನನ್ನು ಯಾರನ್ನೂ ಕೇಳದೆ ತಿರಸ್ಕರಿಸಿದೆಯಲ್ಲವೆ? ಈಗ ಆ ದುಃಖದಿಂದುಂಟಾದ ಕೋಪದ ಫಲವನ್ನು ಬದುಕಿರುವವರೆಗೂ ನೀನು ಸುಖವನ್ನು ಕಳೆದುಕೊಂಡವಳಾಗಿ, ಕಣ್ಣೀರಿಡುತ್ತ ಅನುಭವಿಸು.

೧೮

ಬುದ್ಧಿವಾದ

**ಸಂತ್ಯೇವಾತ್ರ ಗೃಹೇ ಗೃಹೇ ಯುವತಯಸ್ತಾಃ ಪೃಚ್ಛ ಗತ್ವಾಧುನಾ**
**ಪ್ರೇಯಾಂಸಃ ಪ್ರಣಮಂತಿ ಕಿಂ ತವ ಪುನರ್ದಾಸೋ ಯಥಾ ವರ್ತತೇ**
**ಆತ್ಮದ್ರೋಹಿಣಿ ದುರ್ಜನೈಃ ಪ್ರಲಪಿತಂ ಕರ್ಣೇಽನಿಶಂ ಮಾಂ ಕೃಥಾ**
**ಛಿನ್ನಸ್ನೇಹರಸಾ ಭವಂತಿ ಪುರುಷಾ ದುಃಖಾನುವರ್ತ್ಯಾಃ ಪುನಃ ||**

ಹೇ ಆತ್ಮದ್ರೋಹಿಣಿ-ಎಲೌ ಆತ್ಮವಂಚಕಳೇ, ಗೃಹೇ ಗೃಹೇ-ಮನೆ ಮನೆಗಳಲ್ಲಿಯೂ, ಯುವತಯಃ-ತರುಣಿಯರು, ಸಂತಿ ಏವ-ಇದ್ದೇ ಇರುವರಷ್ಟೆ. ಅಧುನಾ-ಈಗ, ಗತ್ವಾ-ಹೋಗಿ, ತಾಃ-ಅವರನ್ನು ಪೃಚ್ಛ-ಕೇಳು. ಪ್ರೇಯಾಂಸಃ-(ಅವರ) ಇನಿಯರು, ಪ್ರಣಮಂತಿ ಕಿಂ-ಹೀಗೆ ನಮಸ್ಕರಿಸುವರೇನು? ತವ(ಪ್ರೇಯಾನ್) ಪುನಃ-ನಿನ್ನ (ಇನಿಯ) ನಾದರೋ, ದಾಸಃ ಯಥಾ-ಸೇವಕನಂತೆ, ವರ್ತತೇ-ನಡೆದುಕೊಳ್ಳುತ್ತಿದ್ದಾನೆ. ದುರ್ಜನೈಃ-ಚಾಡಿಕೋರರಾದ ಕೆಟ್ಟ ಜನರಿಂದ, ಪ್ರಲಪಿತಂ-ಹರಟುವುದನ್ನು, ಕರ್ಣೇ-ಕಿವಿಯಲ್ಲಿ, ಅನಿಶಂ-ಯಾವಾಗಲೂ, ಮಾಕೃಥಾಃ-ಕೇಳಬೇಡ. ಛಿನ್ನ-ಕತ್ತರಿಸಿಹೋದ ಎಂದರೆ ಕಳೆದುಕೊಂಡ, ಸ್ನೇಹ ರಸಾಃ-ಸ್ನೇಹರಸವುಳ್ಳ, ಪುರುಷಾಃ-ಗಂಡಸರು, ಪುನಃ-ಮತ್ತೆ, ದುಃಖ-ಕಷ್ಟದಿಂದ, ಅನುನೇತವ್ಯಾಃ-ಅನುಸರಿಸಲ್ಪಡಲು ಸಾಧ್ಯರಾಗಿ, ಭವಂತಿ-ಆಗುತ್ತಾರೆ.

ಈ ಊರಿನಲ್ಲಿ ಮನೆಮನೆಗಳಲ್ಲಿಯೂ ಯುವತಿಯರು ಇರುವರಷ್ಟೆ. ನೀನೀಗ ಹೋಗಿ ಅವರನ್ನು ಕೇಳು. ಅವರ ಇನಿಯರು ನಿನ್ನ ಇನಿಯನಂತೆ ತಮ್ಮ ಪ್ರಿಯತಮೆಯರಿಗೆ ನಮಸ್ಕರಿಸುವರೇನು ? ನಿನ್ನ ಪ್ರಿಯತಮನಾದರೋ ನಿನ್ನ ದಾಸನಂತೆ ನಡೆದುಕೊಳ್ಳುತ್ತಿದ್ದಾನೆ. ಆದ್ದರಿಂದ ಎಲೌ ಆತ್ಮದ್ರೋಹಿಣಿಯೇ, ಕುಜನರ ಚಾಡಿಮಾತುಗಳಿಗೆ ಕಿವಿಗೊಡಬೇಡ. ಒಮ್ಮೆ ಪುರುಷರ ಪ್ರೇಮ ವಿಮುಖವಾದರೆ ಅದನ್ನು ಹಿಂದಿರುಗಿಸುವುದು ಕಷ್ಟಸಾಧ್ಯವಾಗುತ್ತದೆ.

### ೧೯

ನಲ್ಲನ ವಿಷಯದಲ್ಲಿ ತನಗಿದ್ದ ಕೋಪವನ್ನು ಮಾನಿನಿ ಸಾರ್ಥಕಪಡಿಸಿಕೊಂಡಳು

**ಏಕತ್ರಾಸನಸಂಸ್ಥಿತಿಃ ಪರಿಹೃತಾ ಪ್ರತ್ಯುದ್ಗಮಾದ್ದೂರತ-**
**ಸ್ತಾಂಬೂಲಾಹರಣಚ್ಛಲೇನ ರಭಸಾಶ್ಲೇಷೋಽಪಿ ಸಂವಿಘ್ನಿತಃ ।**
**ಆಲಾಪೋಽಪಿ ನ ಮಿಶ್ರಿತಃ ಪರಿಜನಂ ವ್ಯಾಪಾರಯಂತ್ಯಾಂತಿಕೇ**
**ಕಾಂತಂ ಪ್ರತ್ಯುಪಚಾರತಶ್ಚತುರಯಾ ಕೋಪಃ ಕೃತಾರ್ಥೀಕೃತಃ ॥**

ದೂರತಃ-ದೂರದಿಂದಲೇ, ಪ್ರತ್ಯುದ್ಗಮಾತ್-ಗೌರವರೂಪವಾಗಿ ಮೇಲಕ್ಕೇಳುವುದರಿಂದ, ಏಕತ್ರ-ಒಂದೇ, ಆಸನಸಂಸ್ಥಿತಿಃ ಪೀಠದಲ್ಲಿ ಕುಳಿತುಕೊಳ್ಳುವಿಕೆ, ಪರಿಹೃತಾ ಹೋಗಲಾಡಿಸಲ್ಪಟ್ಟಿತು. ತಾಂಬೂಲ-ತಾಂಬೂಲವನ್ನು, ಆಹರಣ-ತರುವ, ಛಲೇನ-ನೆಪದಿಂದ, ರಭಸಾಶ್ಲೇಷಃ ಅಪಿ-ಬಿಗಿಯಾಗಿ ಅಪ್ಪಿಕೊಳ್ಳುವಿಕೆಯೂ ಕೂಡ, ಸಂವಿಘ್ನಿತಃ ತಡೆಗೊಳಿಸಲ್ಪಟ್ಟಿತು. ಅಂತಿಕೇ-ಇನಿಯನ ಸಮೀಪದಲ್ಲಿ, ಪರಿಜನಂ-ಸೇವಕರನ್ನು, ವ್ಯಾಪಾರಯಂತ್ಯಾ-ನಿಯಮಿಸುವ ಇನಿಯಳಿಂದ, ಆಲಾಪಃ ಅಪಿ-ಸಲ್ಲಾಪವೂ ಕೂಡ, ನ ಮಿಶ್ರಿತಃ-ಸೇರಿಸಲ್ಪಡಲಿಲ್ಲ. ಈ ರೀತಿಯಲ್ಲಿ, ಚತುರಯಾ-ಜಾಣೆಯಾದ ತರುಣಿಯಿಂದ, ಕಾಂತಂ-ತನ್ನ ಪ್ರಿಯನನ್ನು, ಪ್ರತ್ಯುಪಚಾರತಃ-ಉಪಚರಿಸುವ ನೆವದಿಂದಲೇ, ಕೋಪಃ-ಅವಳ ಪ್ರಣಯಕೋಪವು, ಕೃತಾರ್ಥೀಕೃತಃ-ಸಾರ್ಥಕಗೊಳಿಸಲ್ಪಟ್ಟಿತು.

ತನ್ನ ಪ್ರಿಯನು ಬರುವುದನ್ನು ಕಂಡು ಅವನಿಗೆ ಸ್ವಾಗತವನ್ನು ಬಯಸುವಂತೆ ಮೇಲಕ್ಕೆದ್ದು ಅವನು ತನ್ನೊಡನೆ ಒಂದೇ ಪೀಠದಲ್ಲಿ ಕುಳಿತುಕೊಳ್ಳುವುದನ್ನು ನಿವಾರಿಸಿದಳು ತಾನೇ ಅವನಿಗೆ ತಾಂಬೂಲವನ್ನು ತಂದುಕೊಡುವ ನೆವದಲ್ಲಿ ಆಲಿಂಗನಕ್ಕೆ ಅಡ್ಡಿಪಡಿಸಿದಳು. ತನ್ನ ಇನಿಯನಿಗೆ ಉಪಚರಿಸುವಂತೆ ಸೇವಕರನ್ನು ನಿಯಮಿಸುವ ನೆವದಿಂದ ಅವನೊಡನೆ ಮಾತನಾಡಲಿಲ್ಲ. ಈ ರೀತಿಯಲ್ಲಿ ಜಾಣೆಯಾದ ತರುಣಿ ಗಂಡನನ್ನು ಉಪಚರಿಸುವ ನೆವದಿಂದ ತನ್ನ ಇನಿಯನ ಮೇಲೆ ತನಗಿದ್ದ ಕೋಪವನ್ನು ಸಾರ್ಥಕಪಡಿಸಿಕೊಂಡಳು.

## ೨೦

### ಅಳಿಯಾಸೆ

**ಕಥಮಪಿ ಸಖಿ ಕ್ರೀಡಾಕೋಪಾದ್ವ್ರಜೇತಿ ಮಯೋದಿತೇ**
**ಕಠಿನಹೃದಯಃ ಶಯ್ಯಾಂ ತ್ಯಕ್ತ್ವಾ ಬಲಾದ್ಗತ ಏವ ಸಃ ।**
**ಇತಿ ಸರಭಸಂ ಧ್ವಸ್ತಪ್ರೇಮ್ಣಿ ವ್ಯಪೇತಘೃಣೇ ಸ್ಪೃಹಾಂ**
**ಪುನರಪಿ ಹತವ್ರೀಡಂ ಚೇತಃ ಕರೋತಿ ಕರೋಮಿ ಕಿಂ ||**

ಸಖಿ-ಎಲೆ ಗೆಳತಿಯೇ, ಕಥಮಪಿ-ತುಂಬ ಪ್ರಯಾಸದಿಂದ, ಕ್ರೀಡಾಕೋಪಾತ್-ವಿನೋದಕ್ಕಾಗಿ ಸುಳ್ಳು ಕೋಪವನ್ನು ನಟಿಸುವಿಕೆಯಿಂದ,

ವ್ರಜ-ಹೊರಟುಹೋಗು, ಇತಿ-ಹೀಗೆ, ಮಯಾ-ನನ್ನಿಂದ, ಉದಿತೇ-ಹೇಳಲ್ಪಡಲಾಗಿ, ಸಃ-ಆ, ಕಠಿಣಹೃದಯಃ-ನಿಷ್ಠುರಮನಸ್ಸಿನವನಾದ ನನ್ನ ಪ್ರಿಯನು,ಶಯ್ಯಾಂ-ನನ್ನ ಹಾಸಿಗೆಯನ್ನು,ತ್ಯಕ್ತ್ವಾ-ಬಿಟ್ಟು, ಬಲಾತ್-ಬಲಾತ್ಕಾರವಾಗಿ, ಗತಏವ-ಹೊರಟೇಹೋದನು. ಇತಿ-ಹೀಗಿರುವಲ್ಲಿ, ಸರಭಸಂ-ಬಹುಬೇಗ, ಧ್ವಸ್ತ ಪ್ರೇಮ್ಣಿ-ಪ್ರೇಮವನ್ನು ನಾಶಗೊಳಿಸುವ, ವ್ಯಪೇತಘೃಣೇ-ಕರುಣೆಯನ್ನೇ ತೊರೆದಿರುವ ಇನಿಯನಲ್ಲಿ, ಪುನರಪಿ-ಮತ್ತೆ, ಹತವ್ರೀಡಂ-ನಾಚಿಕೆಯಿಲ್ಲದಿರುವ (ನಾಚಿಕೆಹೋದ), ಚೇತಃ-ನನ್ನ ಮನಸ್ಸು, ಸ್ಪೃಹಾಂ-ಆಸೆಯನ್ನು, ಕರೋತಿ-ಉಂಟುಮಾಡುತ್ತದೆ. ಕಿಂ ಕರೋಮಿ-(ನಾನು) ಏನನ್ನು ತಾನೆ ಮಾಡಲಿ?

ಎಲೆಗೆಳತಿ, ತುಂಬ ಪ್ರಯಾಸದಿಂದ ವಿನೋದಕ್ಕಾಗಿ ಸುಳ್ಳು ಹುಡುಗಾಟಕ್ಕಾಗಿ ಕೋಪವನ್ನು ನಟಿಸಿ ಹೊರಟುಹೋಗೆಂದು ನಾನು ಹೇಳಲು, ಕಲ್ಲೆದೆಯ ನನ್ನನಲ್ಲನು ಹಾಸಿಗೆಯನ್ನು ಬಿಟ್ಟು ಹೊರಟೇ ಹೋದನು. ಹೀಗಿರಲು ಪ್ರೇಮವನ್ನು ಹುಡಿಗುಟ್ಟುವ ಕರುಣೆಯನ್ನು ತೊರೆದಿರುವ ಇನಿಯನಲ್ಲಿ ಹಾಳು ನಾಚಿಕೆಯಿಲ್ಲದ ಮನಸ್ಸು ಮತ್ತೆ ಆಸೆಗೊಳ್ಳುತ್ತದೆ. ನಾನು ಏನು ತಾನೆಮಾಡಲಿ?

೨೧

ಪ್ರೇಮದ ಪರಿಣಾಮ

**ಅನಾಲೋಚ್ಯ ಪ್ರೇಮ್ಣಃ ಪರಿಣತಿಮನಾದೃತ್ಯ ಸುಹೃದ**
**ಸ್ತ್ವಯಾಕಾಂಡೇ ಮಾನಃ ಕಿಮಿತಿ ಸರಲೇ ಸಂಪ್ರತಿ ಕೃತಃ ।**
**ಸಮಾಕೃಷ್ಟಾ ಹ್ಯೇತೇ ಪ್ರಲಯದಹನೋದ್ಭಾಸುರಶಿಖಾಃ**
**ಸ್ವಹಸ್ತೇನಾಂಗಾರಾಸ್ತದಲಮಧುನಾರಣ್ಯರುದಿತೈಃ ॥**

ಸರಲೇ-ಸರಳಹೃದಯವುಳ್ಳವಳೇ, ಪ್ರೇಮ್ಣಃ-ನಿಜವಾದ ಪ್ರೇಮದ, ಪರಿಣತಿಂ-ಕೊನೆಯ ಫಲವನ್ನೂ, ಅನಾಲೋಚ್ಯ-ಯೋಚಿಸದೆ, ಸುಹೃದಃ-ಗೆಳತಿಯರನ್ನೂ, ಅನಾದೃತ್ಯ-ಗಣನೆಗೆ ತಾರದೆ, ತ್ವಯಾ-ನಿನ್ನಿಂದ, ಅಕಾಂಡೇ-ಅಕಾಲದಲ್ಲಿ, ಸಂಪ್ರತಿ-ಈಗ, ಕಿಮಿತಿ-ಏತಕ್ಕಾಗಿ, ಮಾನಃ-ಕೋಪವು, ಕೃತಃ-ಮಾಡಲ್ಪಟ್ಟಿತು? ಏತೇ-ಈ, ಪ್ರಲಯ-ಪ್ರಳಯಕಾಲದ, ದಹನ-ಅಗ್ನಿಯಿಂದ, ಉದ್ಭಾಸುರಃ-ವಿಶೇಷವಾಗಿ

ಪ್ರಕಾಶಿಸುವ, ಶಿಖಾಃ-ಉರಿಯುಳ್ಳ, ಅಂಗಾರಾಃ-ಕೆಂಡಗಳು, ಸ್ವಹಸ್ತೇನ-ನಿನ್ನ ಕೈಯಿಂದಲೇ, ಸಮಾಕೃಷ್ಟಾಃಹಿ-ಎಳೆಯಲ್ಪಟ್ಟಂತಾಯಿತಲ್ಲವೇ ! ತತ್-ಆದ್ದರಿಂದ, ಅಧುನಾ-ಈಗ, ಅರಣ್ಯರುದಿತೈಃ-ಕಾಡಿನಲ್ಲಿ ಅಳುವುದರಿಂದ, ಅಲಂ-ಸಾಕು.

ಎಲೈ ಮುಗ್ಧೆ, ಪ್ರಣಯದ ಪರಿಣಾಮವನ್ನು ಚಿಂತಿಸದೆ, ಗೆಳತಿಯರನ್ನು ಗಣನೆಗೆ ತಾರದೆ, ಕಾಲವಲ್ಲದ ಕಾಲದಲ್ಲಿ ಈಗ ಕೋಪವನ್ನೇಕೆ ಸೂಚಿಸುವೆ? ಈ ನಿನ್ನ ವರ್ತನೆಯಿಂದ ಪ್ರಳಯಕಾಲದ ಅಗ್ನಿಯಿಂದ ಹೊರಹೊರಟು ವಿಶೇಷವಾಗಿ ಜ್ವಲಿಸುವ ಕೆಂಡಗಳನ್ನು ನಿನ್ನ ಕೈಯಿಂದಲೇ ನೀನು ಎಳೆದಂತಾಗಲಿಲ್ಲವೆ? ಆದ್ದರಿಂದ ಈ ಅರಣ್ಯರೋದನವನ್ನು ಸಾಕುಮಾಡು.

೨೩

ಮಾನಿನಿ

**ಅಙ್ಗುಲ್ಯಗ್ರನಖೇನ ಬಾಷ್ಪಸಲಿಲಂ ವಿಕ್ಷಿಪ್ಯ ವಿಕ್ಷಿಪ್ಯ ಕಿಂ**
**ತೂಷ್ಣೀಂ ರೋದಿಷಿ ಕೋಪನೇ ಬಹುತರಂ ಫೂತ್ಕೃತ್ಯ**
**ರೋದಿಷ್ಯಸಿ।**
**ಯಸ್ಯಾಸ್ತೇ ಪಿಶುನೋಪದೇಶವಚನೈರ್ಮಾನೇಽತಿ ಭೂಮಿಂ**
**ಗತೇ**
**ನಿರ್ವಿಣ್ಣೋಽನುನಯಂ ಪ್ರತಿ ಪ್ರಿಯತಮೋ ಮಧ್ಯಸ್ಥತಾಮೇ**
**ಷ್ಯತಿ ॥**

(ಹೇ) ಕೋಪನೇ-ಪ್ರಣಯ ಕೋಪದಿಂದ ಕೂಡಿದ ಎಲೆಹೆಣ್ಣೇ, ಅಂಗುಲ್ಯಗ್ರನಖೇನ-ಬೆರಳ ತುದಿಯುಗುರುಗಳಿಂದ, ಬಾಷ್ಪಸಲಿಲಂ-ಕಣ್ಣೀರನ್ನು, ವಿಕ್ಷಿಪ್ಯ ವಿಕ್ಷಿಪ್ಯ-ಬಾರಿ ಬಾರಿಗೂ ಚಿಮ್ಮುತ್ತ, ಕಿಂ-ಏತಕ್ಕಾಗಿ, ತೂಷ್ಣೀಂ-ನಿಶ್ಶಬ್ದವಾಗಿ, ರೋದಿಷಿ-ಅಳುತ್ತಿರುವೆ? ಬಹುತರಂ-ಅನೇಕವೇಳೆ, ಫೂತ್ಕೃತ್ಯ-ಕೇವಲಧ್ವನಿಪೂರ್ವಕವಾಗಿ, ರೋದಿಷ್ಯಸಿ-ಇನ್ನು ಮುಂದೆಯೂ ಅಳುವೆ. ಯಸ್ಯಾಃ-ಈ ರೀತಿ ಕೋಪಪರವಶಳಾಗಿರುವ, ತೇ-ನಿನ್ನ, ಮಾನೇ-ಕೋಪವು (ಅಭಿಮಾನ), ಪಿಶುನೋಪದೇಶವಚನೈಃ-ಚಾಡಿಕೋರರ ಉಪದೇಶದ ಮಾತುಗಳಿಂದ, ಅತಿಭೂಮಿಂ-ಮಿತಿಮೀರಿ

ಹೋದರೆ, ಪ್ರಿಯತಮಃ-ನಿನ್ನ ಇನಿಯನು, ಅನುನಯಂಪ್ರತಿ-ನಿನ್ನನ್ನು ಅನುಸರಿಸುವ ಕಾರ್ಯದಲ್ಲಿ, ನಿರ್ವಿಣ್ಣಃ-ಜುಗುಪ್ಸೆಪಡೆದು, ಮಧ್ಯಸ್ಥತಾಂ-ಔದಾಸೀನ್ಯವನ್ನು, ಏಷ್ಯತಿ-ಹೊಂದುವನು.

ಎಲೈ ಮಾನಿನಿ, ಬೆರಳಿನ ತುದಿಯುಗುರುಗಳಿಂದ ಕಣ್ಣೀರನ್ನು ಮಿಡಿಯುತ್ತ ನಿಶ್ಶಬ್ದವಾಗಿ ಏಕೆ ಅಳುವೆ? ಅನೇಕವೇಳೆ ಬಿಕ್ಕಿ ಬಿಕ್ಕಿ ಇನ್ನೂ ಮುಂದೆ ಅಳುವೆ. ಈ ರೀತಿಯಾಗಿ ಕೋಪಕ್ಕೆ ಗುರಿಯಾಗಿರುವ ನಿನ್ನ ಅಭಿಮಾನವು ಚಾಡಿಕೋರರ ಉಪದೇಶದಿಂದ ಮಿತಿಮೀರಿದರೆ, ನಿನ್ನ ಪ್ರಿಯತಮನು ನಿನ್ನನ್ನು ಅನುಸರಿಸುವ ಕಾರ್ಯದಲ್ಲಿ ಜುಗುಪ್ಸೆಯಿಂದ ಔದಾಸೀನ್ಯವನ್ನು ಹೊಂದುವನು.

೨೩

ಪ್ರೇಮದ ವಂಚನೆ

**ದತ್ತೋಽಸ್ಯಾಃ ಪ್ರಣಯಸ್ತ್ವಯೈವ ಭವತ್ಯೈವೇಯಂ ಚಿರಂ ಲಾಲಿತಾ**
**ದೈವಾದದ್ಯ ಕಿಲ ತ್ವಮೇವ ಕೃತವಾನಸ್ಯಾ ನವಂ ವಿಪ್ರಿಯಂ ।**
**ಮನ್ಯುರ್ದುಸ್ಸಹ ಏವ ಯಾತ್ಯುಪಶಮಂ ನೋ ಸಾನ್ತ್ವವಾದೈಃ ಸ್ಫುಟಂ**
**ಹೇ ನಿಸ್ತ್ರಿಂಶ ವಿಮುಕ್ತಕಂಠಕರುಣಂ ತಾವತ್ಸಖೀ ರೋದಿತು ॥**

ಹೇ ನಿಸ್ತ್ರಿಂಶ-ಎಲೈದಯಾರಹಿತನಾದ ಕಟುಕನೇ, ಅಸ್ಯಾಃ ಈ ನಮ್ಮ ಸಖಿಗೆ, ಪ್ರಣಯಃ-ನಿನ್ನ ಪ್ರೇಮವು, ತ್ವಯೈವ-ನಿನ್ನಿಂದಲೇ, ದತ್ತಃ-ತೋರಿಸಲ್ಪಟ್ಟಿತು. ಇಯಂ-ಈ ನಮ್ಮ ಗೆಳತಿಯು, ಭವತಾ ಏವ-ನಿನ್ನಿಂದಲೇ, ಚಿರಂ-ಬಹುಕಾಲ, ಲಾಲಿತಾ-ಪ್ರೀತಿಯಿಂದ ರಕ್ಷಿಸಲ್ಪಟ್ಟಳು.(ಲಾಲಿಸಲ್ಪಟ್ಟಳು) ಅದ್ಯಕಿಲ-ಈಗಲಾದರೋ, ದೈವಾತ್-ದುರದೃಷ್ಟದಿಂದ, ತ್ವಮೇವ-ನೀನೇ, ಅಸ್ಯಾಃ-ಇವಳಿಗೆ, ನವಂ-ಎಂದೂ ಇಲ್ಲದ ಎಂದರೆ ಹೊಸದಾದ, ವಿಪ್ರಿಯಂ-ಮನಸ್ಸಿನ ದುಃಖವನ್ನು, ಕೃತವಾನ್-ಉಂಟುಮಾಡಿರುವೆ. ಮನ್ಯು-ಕೋಪವು,ದುಸ್ಸಹ ಏವ-ಸಹಿಸಲು ಅಸಾಧ್ಯವಾದುದೇ ಆದರೆ, (ಅದು) ಸ್ವಾಂತವಾದೈಃ-ಸಮಾಧಾನಕರವಾದ ಮಾತುಗಳಿಂದ, ಸ್ಫುಟಂ-ಸ್ಪಷ್ಟವಾಗಿ, ಉಪಶಮಂ-ಶಾಂತಿಯನ್ನು, ನೋಯಾತಿ-ಹೊಂದಲಾರದು. ಸಖೀ ತಾವತ್-ಈ ನಮ್ಮ ಗೆಳತಿಯಾದರೋ,

ವಿಮುಕ್ತಕಂಠಕರುಣಂ-ಆರ್ತನಾದದಲ್ಲಿ ಎಲ್ಲ ಕರುಣೆಯನ್ನೂ ಕಳೆದು ಕೊಂಡವಳಾಗಿ, ರೋದಿತು-ಗೋಳಾಡಲಿ.

ಎಲೈ ನಿಸ್ತ್ರಿಂಶ, ಈ ನಮ್ಮ ಸಖಿಗೆ ನೀನು ಮೊದಲು ಪ್ರೇಮವನ್ನು ತೋರಿಸಿದೆ. ಬಹುಕಾಲ ಆಕೆ ನಿನ್ನ ಪ್ರೇಮದಿಂದ ಲಾಲಿತಳಾದಳು. ಈಗಲಾದರೋ ನೀನೇ ಇವಳಿಗೆ ಈಕೆ ಹಿಂದೆಂದೂ ಅನುಭವಿಸದ ಹೊಸ ದುಃಖವನ್ನುಂಟುಮಾಡಿರುವೆ. ಇವಳ ಕೋಪ ಸಹಿಸಲು ಅಸಾಧ್ಯವಾದುದು. ನಿನ್ನ ಸಮಾಧಾನಕರವಾದ ಮಾತುಗಳಿಂದ ಅದು ಉಪಶಮನವನ್ನು ಹೊಂದಲಾರದು. ನಿನ್ನ ಕರುಣೆಯನ್ನು ಕಳೆದುಕೊಂಡ ಈ ನಮ್ಮ ಸಖಿ ಗೋಳಾಡಲಿ.

೨೪

ಮಾನಿನಿ

**ಲಿಖನ್ನಾಸ್ತೇ ಭೂಮಿಂ ಬಹಿರವನತಃ ಪ್ರಾಣ ದಯಿತೋ**
**ನಿರಾಹಾರಾಃ ಸಖ್ಯಃ ಸತತರುದಿತೋಚ್ಛೂನನಯನಾಃ ।**
**ಪರಿತ್ಯಕ್ತಂ ಸರ್ವಂ ಹಸಿತಪಠಿತಂ ಪಂಜರಶುಕೈ**
**ಸ್ತವಾವಸ್ಥಾ ಚೇಯಂ ವಿಸೃಜ ಕಠಿನೇ ಮಾನಮಧುನಾ ॥**

ಹೇ ಕಠಿನೇ ಎಲೌ ನಿಷ್ಠುರಮನಸ್ಸಿನವಳೇ, ಪ್ರಾಣದಯಿತಃ-ನಿನ್ನ ಪ್ರಾಣಪ್ರಿಯನು, ಬಹಿಃ ಹೊರಭಾಗದಲ್ಲಿ, ಅವನತಃ ತಲೆಯನ್ನು ತಗ್ಗಿಸಿಕೊಂಡು, ಭೂಮಿಂ-ನೆಲವನ್ನು, ಲಿಖನ್-ಗೀರುತ್ತ, ಆಸ್ತೇ-ಇದ್ದಾನೆ. ಸಖ್ಯಃ-ನಿನ್ನ ಗೆಳತಿಯರೆಲ್ಲರೂ, ಸತತ-ಯಾವಾಗಲೂ, ರುದಿತಾ-ಕಣ್ಣೀರಿಡುತ್ತ, ಉಚ್ಛೂನಯನಾಃ-ಕಾಂತಿಹೀನವಾದ ಕಣ್ಣಿನ ನೋಟವುಳ್ಳವರಾಗಿ, ನಿರಾಹಾರಾಃ-ಆಹಾರವನ್ನು ತೊರೆದವರಾಗಿದ್ದಾರೆ. ಪಂಜರಶುಕೈಃ-ಪಂಜರದಲ್ಲಿರುವ ಗಿಳಿಗಳಿಂದ, ಸರ್ವಂ-ಎಲ್ಲ ರೀತಿಯ, ಹಸಿತಪಠಿತಂ-ನಗುವಿಕೆ ಮತ್ತು ಮಾತನಾಡುವಿಕೆಯೆಲ್ಲವೂ, ಪರಿತ್ಯಕ್ತಂ-ನಿಲ್ಲಿಸಲ್ಪಟ್ಟಿತು. ತವ-ನಿನ್ನ, ಅವಸ್ಥಾಚ-ರೀತಿಯಾದರೋ, ಇಯಂ-ಈ ರೀತಿ ಇರುವುದು. ಅಧುನಾ-ಈಗ, ಮಾನಂ-ಕೋಪವನ್ನು, ವಿಸೃಜ-ಬಿಟ್ಟುಬಿಡು.

ಕಠಿಣಹೃದಯವುಳ್ಳವಳೇ, ನಿನ್ನ ಪ್ರಾಣಪ್ರಿಯನು ಹೊರಭಾಗದಲ್ಲಿ

ತಲೆತಗ್ಗಿಸಿಕೊಂಡು ನೆಲವನ್ನು ಗೀರುತ್ತ ನಿಂತಿದ್ದಾನೆ. ನಿನ್ನ ಗೆಳತಿಯರೆಲ್ಲ ಒಂದೇ ಸಮನಾಗಿ ಕಣ್ಣೀರಿಡುತ್ತ ಮಂಕಾದ ನೋಟವುಳ್ಳವರಾಗಿ ಆಹಾರವನ್ನು ತೊರೆದಿದ್ದಾರೆ. ಪಂಜರದ ಗಿಳಿಗಳು ನಗುತ್ತಿಲ್ಲ; ಮಾತನಾಡುತ್ತಿಲ್ಲ. ನಿನ್ನ ಅವಸ್ಥೆಯಾದರೋ ಈ ರೀತಿ ಇದೆ. ಇನ್ನಾದರೂ ನಿನ್ನ ಇನಿಯನ ವಿಷಯದಲ್ಲಿ ಕೋಪವನ್ನು ಬಿಡು.

೨೫

ಧೂರ್ತ

**ದೃಷ್ಟ್ವೈಕಾಸನಸಂಸ್ಥಿತೇ ಪ್ರಿಯತಮೇ ಪಶ್ಚಾದುಪೇತ್ಯಾದರಾ**
**ದೇಕಸ್ಯಾನಯನೇ ನಿಮೀಲ್ಯ ವಿಹಿತಕ್ರೀಡಾನುಬಂಧಚ್ಛಲಃ ।**
**ಈಷದ್ವಕ್ರಿತಕಂಧರಃ ಸಪುಲಕಃ ಪ್ರೇಮೋಲ್ಲಸನ್ಮಾನಸಾ**
**ಮಂತರ್ಹಾಸಲಸತ್ಕಪೋಲಫಲಕಾಂ ಧೂರ್ತೋಽಪರಾಂ**
**ಚುಂಬತಿ ॥**

ಏಕಾಸನೇ-ಒಂದೇ ಪೀಠದಲ್ಲಿ, ಸಂಸ್ಥಿತೇ-ಕುಳಿತಿದ್ದ, ಪ್ರಿಯತಮೇ-ಇಬ್ಬರು ನಲ್ಲೆಯರನ್ನೂ, ದೃಷ್ಟ್ವಾ-ನೋಡಿ, ಪಶ್ಚಾತ್-ಹಿಂಭಾಗದಿಂದ, ಉಪೇತ್ಯ-ಬಂದು, ಆದರಾತ್-ಪ್ರೀತಿಯಿಂದ, ಏಕಸ್ಯಾಃ-ಒಬ್ಬನಲ್ಲೆಯ, (ಇವಳು ಹಿರಿಯವಳೇ ಇರಬಹುದಲ್ಲವೇ ?) ನಯನೇ-ಎರಡು ಕಣ್ಣುಗಳನ್ನೂ, ವಿಹಿತ-ತಕ್ಕುದಾದ, ಕ್ರೀಡಾನುಬಂಧ-ಆಟದ ತೋರಿಕೆಯ, ಛಲಃ-ನೆಪವುಳ್ಳವನಾಗಿ, ನಿಮೀಲ್ಯ ಮುಚ್ಚಿ, ಈಷತ್-ಸ್ವಲ್ಪಮಟ್ಟಿಗೆ, ವಕ್ರಿತ-ಬಾಗಿದ, ಕಂಧರಃ-ಕತ್ತುಳ್ಳವನಾಗಿ, ಸಪುಲಕಃ-ರೋಮಾಂಚದಿಂದ ಕೂಡಿದವನಾದ, ಧೂರ್ತಃ-ದಿಟ್ಟನಾದ ಇನಿಯನು, ಪ್ರೇಮ-ಪ್ರೀತಿಯಿಂದ, ಉಲ್ಲಸತ್-ಅರಳುತ್ತಿರುವ, ಮಾನಸಾಂ-ಮನಸ್ಸುಳ್ಳ, ಅಂತರ್ಹಾಸ-(ಇನಿಯನು ತನ್ನನ್ನು ಪ್ರೀತಿಸುವನೆಂಬ)ಮನಸ್ಸಿನ ಹರ್ಷವನ್ನು ತೋರ್ಪಡಿಸುತ್ತಿರುವ ಮಂದಹಾಸದಿಂದ, ಲಸತ್ ಸುಂದರವಾಗಿರುವ ಕಪೋಲಫಲಕಾಂ-ವಿಶಾಲವಾದ ಕೆನ್ನೆಯುಳ್ಳ, ಅಪರಾಂ-ಇನ್ನೊಬ್ಬ ಪ್ರಿಯತಮೆಯನ್ನು, (ಕಿರಿಯಳನ್ನು) ಚುಂಬತಿ-ಮುತ್ತಿಡುವನು.

ಒಂದೇ ಆಸನದಲ್ಲಿ ಕುಳಿತಿದ್ದ ತನ್ನಿಬ್ಬರು ನಲ್ಲೆಯರನ್ನು ನೋಡಿ, ಹಿಂಭಾಗದಿಂದ ಮೆಲ್ಲನೆ ಬಂದು ಪ್ರೀತಿಯಿಂದ ಒಬ್ಬಳ ಎರಡು ಕಣ್ಣು

ಗಳನ್ನೂ ಕಾಲಕ್ಕೆ ತಕ್ಕ ಕ್ರೀಡೆಯ ನೆಪದಿಂದ ಮುಚ್ಚಿ, ಸ್ವಲ್ಪಮಟ್ಟಿಗೆ ತನ್ನ ಕತ್ತನ್ನು ಬಾಗಿಸಿ, ರೋಮಾಂಚಗೊಂಡ ಧೂರ್ತನು ಪ್ರೇಮದಿಂದ ಅರಳುತ್ತಿರುವ ಮನಸ್ಸಿನ ಹರ್ಷವನ್ನು ತೋರ್ಪಡಿಸುತ್ತಿರುವ ಮಂದ ಹಾಸದಿಂದ ಸುಂದರವಾದ, ಇನ್ನೊಬ್ಬ ಪ್ರಿಯತಮೆಯ ವಿಶಾಲವಾದ ಕೆನ್ನೆಯನ್ನು ಮುತ್ತಿಡುವನು.

೨೬–೨೬

ಮಾನಿನಿಯ ಮಾನದ ಪರಿಣಾಮ

**ಪುರಸ್ತನ್ವ್ಯಾ ಗೋತ್ರಸ್ಖಲನಚಕಿತೋಽಹಂ ನತಮುಖಃ**
**ಪ್ರವೃತ್ತೋ ವೈಲಕ್ಷ್ಯಾತ್ಕಿಮಪಿ ಲಿಖಿತುಂ ದೈವಹತಕಃ।**
**ಸ್ಫುಟೋ ರೇಖಾನ್ಯಾಸಃ ಕಥಮಪಿ ಸ ತಾದೃಕ್ಪರಿಣತೋ**
**ಗತಾ ಯೇನ ವ್ಯಕ್ತಿಂ ಪುನರವಯವೈಃ ಸೈವ ತರುಣೀ ॥**

**ತತಶ್ಚಾಭಿಜ್ಞಾಯ ಸ್ಫುರದರುಣಗಂಡಸ್ಥಲರುಚಾ**
**ಮನಸ್ವಿನ್ಯಾ ರೂಢ ಪ್ರಣಯಸಹಸೋದ್ಗದ್ಗದಗಿರಾ ।**
**ಅಹೋ ಚಿತ್ರಂ ಚಿತ್ರಂ ಸ್ಫುಟಮಿತಿ ನಿಗದ್ಯಾಶ್ರು ಕಲುಷಂ ।**
**ರುಷಾ ಬ್ರಹ್ಮಾಸ್ತ್ರಂ ಮೇ ಶಿರಸಿ ನಿಹಿತೋ ವಾಮಚರಣಃ ॥**

ತನ್ವ್ಯಾಃ-ಪ್ರಿಯಳ. ಪುರಃ-ಎದುರಿನಲ್ಲಿ, ಗೋತ್ರ (ಪರಸ್ತ್ರೀ) ಹೆಸರಿನ, ಸ್ಖಲನ-ತಪ್ಪಿ ಹೇಳುವಿಕೆಯಲ್ಲಿ, ಚಕಿತಃ-ಹೆದರಿದ, ಅಹಂ-ನಾನು, ನತಮುಖಃ-ತಲೆತಗ್ಗಿಸಿದವನಾಗಿ, ದೈವಹತಕಃ-ದೈವದಿಂದ ಹೊಡೆಯಲ್ಪಟ್ಟವನಾಗಿ ಎಂದರೆ ದುರದೃಷ್ಟಶಾಲಿಯಾಗಿ, ವೈಲಕ್ಷ್ಯಾತ್-ಬೇರೆ ಯೋಚನೆಯಿಂದ (ನಾಚಿಕೆಯಿಂದ), ಕಿಮಪಿ-ಏನನ್ನೋ, ಲಿಖಿತುಂ-ಬರೆಯಲು, ಪ್ರವೃತ್ತಃ-ತೊಡಗಿದೆನು. ಸ್ಫುಟಃ-ಸ್ಪಷ್ಟವಾಗಿ ಕಂಡುಬಂದ, ಸಃ-ಆ, ರೇಖಾನ್ಯಾಸಃ-ಗೀರುಗಳ ಬರೆಯುವಿಕೆ, ಕಥಮಪಿ-ಹೇಗೋ ಆಗಿ, ತಾದೃಕ್ಪರಿಣತಃ-ಅಂತಹ ಅವಸ್ಥೆಯನ್ನೇ ಪಡೆಯಿತು. ಯೇನ-ಯಾವ ಹೆಂಗಸಿನ ಹೆಸರಿನ ಉಚ್ಚಾರಣೆಯಿಂದ, ಪುನಃ-ಮತ್ತೆ, ಸಾ ಏವ ತರುಣೀ-ಅದೇ ಹೆಸರಿನ ಹೆಂಗಸು, ಅವಯವೈಃ-ಎಲ್ಲ ಅವಯವಗಳಿಂದ ಕೂಡಿದವಳಾಗಿ, ವ್ಯಕ್ತಿಂ-ಪೂರ್ಣ ಆಕಾರವನ್ನು, ಗತಾ-ಹೊಂದಿದಳು.

ತತಃ-ಅನಂತರ, ಸ್ಫುರತ್-ಪ್ರಕಾಶಮಾನವಾದ, ಅರುಣ-ಕೆಂಪಾದ, ಗಂಡಸ್ಥಲ-ಕಪೋಲಪ್ರದೇಶದ, ರುಚಾ-ಕಾಂತಿಯುಳ್ಳ, ರೂಢ-ಸ್ಥಿರವಾದ, ಪ್ರಣಯ-ಪ್ರೇಮದಿಂದಲೂ, ಸಹಸಾ-ಹಾಸ್ಯದಿಂದಲೂ, ಘುದ್ಗದ್ಗದ-ತುಂಬ ಗಡುಸಾದ, ಗಿರಾ-ಮಾತುಳ್ಳ, ಮನಸ್ವಿನ್ಯಾ-ಧೀರಳಾದ ಪ್ರಿಯೆಯಿಂದ, ಅಭಿಜ್ಞಾಯ-ತಿಳಿದು, ಅಹೋ-ಅಯ್ಯೋ, ಚಿತ್ರಂ-ವಿಚಿತ್ರವಾದ, ಚಿತ್ರಂ-ಬೇರೊಬ್ಬ ಹೆಣ್ಣಿನ ಪ್ರತಿಬಿಂಬವು, ಸ್ಫುಟಂ-ಸ್ಪಷ್ಟವಾಗಿದೆ. ಇತಿ-ಹೀಗೆಂದು, ಸಿಗದ್ಯ-ಹೇಳಿ, ಅಶ್ರುಕಲುಷಂ-ಕಣ್ಣೀರಿನಿಂದ ಕೂಡಿ ಕದಡಿದ ಮನಸ್ಸುಳ್ಳವಳಾಗಿ, ರುಷಾ-ಹೆಚ್ಚಾದ ಕೋಪದಿಂದ, ಬ್ರಹ್ಮಾಸ್ತ್ರಂ-ಬ್ರಹ್ಮಾಸ್ತ್ರದಂತಿರುವ, ವಾಮಚರಣಃ-ಎಡದ ಕಾಲು, ಮೇ-ನನ್ನ, ಶಿರಸಿ-ತಲೆಯಲ್ಲಿ, ನಿಹಿತಃ-ಇಡಲ್ಪಟ್ಟಿತು.

ಪ್ರಿಯಳ ಎದುರಿನಲ್ಲಿ ಮಾತನಾಡುತ್ತ ಎಚ್ಚರತಪ್ಪಿ ನನಗೆ ಪ್ರಿಯಳಾದ ಬೇರೊಬ್ಬ ಹೆಣ್ಣಿನ ಹೆಸರನ್ನು ಹೇಳಿದೆನು. ಕೂಡಲೇ ಎಚ್ಚತ್ತು ಹೆದರಿದ ನಾನು ತಲೆತಗ್ಗಿಸಿ ದುರದೃಷ್ಟದಿಂದಲೂ ನಾಚಿಕೆಯಿಂದಲೂ ಬೇರೆಯ ಯೋಚನೆಯಿಂದಲೂ ಕೂಡಿ ನೆಲದ ಮೇಲೆ ಏನನ್ನೋ ಬರೆಯಲು ತೊಡಗಿದೆನು. ಸ್ಪಷ್ಟವಾಗಿ ಬರೆದ ಆ ರೇಖೆಗಳು ನನ್ನ ಇನ್ನೊಬ್ಬ ಪ್ರಿಯಳ ಆಕಾರವನ್ನು ಪಡೆದವು. ನಾನು ಹೆಸರಿಸಿದ ತರುಣಿಯೇ ಸಕಲಾವಯವಗಳಿಂದ ಕೂಡಿ ಪೂರ್ಣವಾದ ಆ ರೂಪವನ್ನು ಪಡೆದಳು.

ಆ ಬಳಿಕ ಹೊಳೆಯುತ್ತಿದ್ದ ಕೆಂಪಾದ ಕಪೋಲದ ನನ್ನ ಪ್ರಿಯೆ, ಪ್ರೇಮದ ಮಾತುಗಳನ್ನು ಕೋಪಕ್ಕೆ ತಿರುಗಿಸಿ ಧೀರಳಾದ ಅವಳು ನನ್ನ ಅಭಿಪ್ರಾಯವನ್ನು ತಿಳಿದು ಗಡುಸುನುಡಿಗಳಿಂದ 'ಆಹಾ! ಈ ಚಿತ್ರ ಎಷ್ಟು ವಿಚಿತ್ರವಾಗಿದೆ. ಇದರ ಭಾವವಂತೂ ಸ್ಪಷ್ಟ' ಎಂದು ಹೇಳಿ ಕಣ್ಣೀರು ತುಂಬಿ ಕದಡಿದ ಮನಸ್ಸುಳ್ಳವಳಾಗಿ ಬ್ರಹ್ಮಾಸ್ತ್ರದಂತಿದ್ದ ತನ್ನ ಎಡಗಾಲನ್ನು ನನ್ನ ತಲೆಯಲ್ಲಿಟ್ಟಳು.

೨೮

ಅನುನಯ

**ಲೋಲದ್ಭ್ರೂಲತಯಾ ವಿಪಕ್ಷದಿಗುಪನ್ಯಾಸೇಽವಧೂತಂ ಶಿರ**
**ಸ್ತದ್ವೃತ್ತಾಂತನಿರೀಕ್ಷಣೇ ಕೃತನಮಸ್ಕಾರೋ ವಿಲಕ್ಷಃ ಸ್ಥಿತಃ ।**

**ಕೋಪಾತ್ತಾಮ್ರ ಕಪೋಲಭಿತ್ತಿನಿ ಮುಖೇ ದೃಷ್ಟ್ಯಾ ಗತಃ ಪಾದಯೋ
ರುತ್ಸೃಷ್ಟೋ ಗುರುಸಂನಿಧಾವಪಿ ವಿಧಿರ್ದ್ವಾಭ್ಯಾಂ ನ ಕಾಲೋಚಿತಃ ||**

ಲೋಲತ್-ಚಂಚಲವಾದ, ಭ್ರೂಲತಯಾ-ಹುಬ್ಬಿನ ಬಳ್ಳಿಯಿಂದ ಕೂಡಿದ (ಪ್ರಿಯೆಯಿಂದ), ವಿಪಕ್ಷದಿಗುಪನ್ಯಾಸೇ-ಸವತಿಯಿರುವ ದಿಕ್ಕನ್ನು ಹೇಳಿದಾಗ, ಶಿರಃ-ತಲೆ, ಅವಧೂತಂ-ಅಡ್ಡಲಾಗಿ ಮಾಡಲ್ಪಟ್ಟಿತು. ತದ್ವೃತ್ತಾಂತ-ಪ್ರಿಯೆಗೆ ಅರ್ಥವಾಗಿ ಕೋಪಬಂದಿರುವುದನ್ನು, ನಿರೀಕ್ಷಣೇ-ನೋಡುವುದರಿಂದ, ಕೃತನಮಸ್ಕಾರಃ-ಮಾಡಲ್ಪಟ್ಟ ನಮಸ್ಕಾರವುಳ್ಳವನಾಗಿ, ವಿಲಕ್ಷಃ-ಒಂದೇ ಕಡೆ ನಟ್ಟನೋಟವುಳ್ಳವನಾಗಿ, ಸ್ಥಿತಃ ನಿಂತುಬಿಟ್ಟನು.-ಮುಖೇ-ಇನಿಯಳ ಮುಖವು, ಕೋಪಾತ್-ಕೋಪದಿಂದ, ತಾಮ್ರ-ಕೆಂಪಾದ, ಕಪೋಲಭಿತ್ತಿನಿ-ವಿಶಾಲವಾದ ಕೆನ್ನೆಯ ಭಾಗವುಳ್ಳದ್ದಾಗಲು, ದೃಷ್ಟ್ಯಾ-ನೋಟದಿಂದ, ಪಾದಯೋ-ಎರಡು ಕಾಲುಗಳಲ್ಲಿಯೂ, ಗತಃ ನಮಸ್ಕರಿಸಿದವನಾದನು. ದ್ವಾಭ್ಯಾಂ-ಹೀಗೆ ನಲ್ಲನಲ್ಲೆಯರಿಬ್ಬರಿಂದಲೂ, ಗುರುಸನ್ನಿಧೌ ಅಪಿ-ಹಿರಿಯರ ಸಮೀಪದಲ್ಲಿಯೂ ಕೂಡ, ಕಾಲೋಚಿತಃ-ಪ್ರಣಯಕೋಪದ ಕಾಲದಲ್ಲಿ ಉಚಿತವಾದ, ವಿಧಿಃ-ಕಾರ್ಯಾಚರಣೆ, ನ ಉತ್ಸೃಷ್ಟಃ ಬಿಡಲ್ಪಡಲಿಲ್ಲ.

ಇನಿಯನು ತನ್ನ ಪ್ರಿಯತಮೆಯ ಎದುರಿನಲ್ಲಿದ್ದಾಗ, ಪ್ರಸಂಗವಶದಿಂದ ಸವತಿಯಿದ್ದ ದಿಕ್ಕಿನ ಹೆಸರನ್ನು ಸೂಚಿಸಿದನು. ಇದರಿಂದ ತನ್ನ ಪ್ರಿಯತಮೆಗೆ ಕೋಪ ಬಂದಿರುವುದನ್ನು ಅರಿತು ಅವನು ಒಂದೇಕಡೆ ದೃಷ್ಟಿಯನ್ನಿಟ್ಟು ದೊಡ್ಡವರಿಗೆ ನಮಸ್ಕರಿಸುವ ನೆಪದಿಂದ ಅವಳಿಗೆ ನಮಸ್ಕರಿಸಿದನು. ಅಷ್ಟಕ್ಕೂ ಅವಳು ಪ್ರಸನ್ನಳಾಗದೆ ಕೆಂಪಾದ ಕೆನ್ನೆಯಿಂದ ಮುಖದಲ್ಲಿ ಕೋಪವನ್ನು ಸೂಚಿಸಿದಳು. ಆಗ ಅವಳ ಇನಿಯನು ಅವಳ ಎರಡು ಕಾಲುಗಳ ಮೇಲೆ ತನ್ನ ನೋಟವನ್ನು ಪ್ರಸರಿಸಿದನು. ಹೀಗೆ ಗುರುಸನ್ನಿಧಿಯಲ್ಲಿಯೂ ಕೂಡ ಪ್ರಣಯ ಕೋಪದ ಕಾಲದಲ್ಲಿ ಉಚಿತವಾದ ಕಾರ್ಯಾಚರಣೆಯನ್ನು ಅವರು ಬಿಡಲಿಲ್ಲ.

## ೨೯

### ನಿರಾಶೆ

**ಲಾಕ್ಷಾಲಕ್ಷ್ಮ ಲಲಾಟಪಟ್ಟಮಭಿತಃ ಕೇಯೂರಮುದ್ರಾ ಗಲೇ
ವಕ್ತ್ರೇ ಕಜ್ಜಲಕಾಲಿಮಾ ನಯನಯೋಸ್ತಾಂಬೂಲರಾಗೋಽಪರಃ |
ದೃಷ್ಟ್ವಾ ಕೋಪವಿಧಾಯಿ ಮಂಡನಮಿದಂ ಪ್ರಾತಶ್ಚಿರಂ ಪ್ರೇಯಸೋ
ಲೀಲಾತಾಮರಸೋದರೇ ಮೃಗದೃಶಃ ಶ್ವಾಸಾಃ ಸಮಾಪ್ತಿಂ ಗತಾಃ ||**

ಲಲಾಟಪಟ್ಟಂ-ವಿಶಾಲವಾದ ಹಣೆಯ, ಅಭಿತಃ-ಸುತ್ತಲೂ, ಲಾಕ್ಷಾಲಕ್ಷ್ಮ ಅರಗಿನ ರಸದ ಗುರುತೂ, ಗಲೇ-ಕತ್ತಿನಲ್ಲಿ, ಕೇಯೂರ ಮುದ್ರಾ-ಕಂಠಹಾರದ ಗುರುತೂ,ವಕ್ತ್ರೇ ಮುಖದಲ್ಲಿ, ಕಜ್ಜಲಕಾಲಿಮಾ-ಕಾಡಿಗೆಯ ಕಪ್ಪೂ, ನಯನಯೋಃ-ಕಣ್ಣುಗಳಲ್ಲಿ,ಅಪರಃ-ಬೇರೆಯದಾದ, ತಾಂಬೂಲರಾಗಃ-ತಾಂಬೂಲದ ಕೆಂಪೂ, ಇದಂ-ಈ ತೆರನಾದ, ಕೋಪ ವಿಧಾಯಿ-ಕೋಪವನ್ನುಂಟುಮಾಡುವ, ಪ್ರೇಯಸಃ-ಪತಿಯ,ಮಂಡನಂ ಅಲಂಕಾರವನ್ನು, ಪ್ರಾತಃ ಬೆಳಗಿನ ವೇಳೆಯಲ್ಲಿ, ಚಿರಂ-ಬಹಳ ಹೊತ್ತು, ದೃಷ್ಟ್ವಾ-ನೋಡಿ, ಮೃಗದೃಶಃ-ಜಿಂಕೆಯಂತೆ ಕಣ್ಣುಳ್ಳ ತರುಣಿಯ, ಶ್ವಾಸಾಃ-ಉಸಿರು, ಲೀಲಾ-ಆಟದ, ತಾಮರಸ-ಕಮಲದ, ಉದರೇ ಮಧ್ಯ ಭಾಗದಲ್ಲಿ, ಸಮಾಪ್ತಿಂಗತಾಃ-ಕೊನೆಯನ್ನು ಪಡೆಯಿತು.

ವಿಶಾಲವಾದ ಹಣೆಯ ಸುತ್ತಲೂ ಅರಗಿನ ರಸದ ಗುರುತೂ, ಕಂಠದಲ್ಲಿ ಹಾರದ ಗುರುತೂ, ಮುಖದಲ್ಲಿ ಕಾಡಿಗೆಯ ಕಪ್ಪೂ, ಕಣ್ಣಿನಲ್ಲಿ ತಾಂಬೂಲದ ಕೆಂಪೂ, ಈ ವಿಧವಾದ ಕೋಪವನ್ನು ಬರಿಸುವ ಪ್ರಿಯನ ಅಲಂಕಾರವನ್ನು ಬೆಳಗಿನ ಸಮಯದಲ್ಲಿ ಬಹುಕಾಲ ನೋಡಿದ ಕುರಂಗಾಕ್ಷಿಯು ತನ್ನ ಕೈಯಲ್ಲಿದ್ದ ಲೀಲಾಕಮಲದ ಮಧ್ಯಭಾಗಕ್ಕೆ ತನ್ನ ಉಸಿರನ್ನು ಬಿಟ್ಟಳು.

## ೩೦

### ಭ್ರಾಂತಿಯಿಂದ ಇಷ್ಟಪ್ರಾಪ್ತಿ

**ಲೀಲಾತಾಮರಸಾಹತೋऽನ್ಯವನಿತಾನಿಶ್ಶಂಕದಷ್ಟಾಧರಃ**
**ಕಶ್ಚಿತ್ಕೇಸರದೂಷಿತೇಕ್ಷಣ ಇವ ವ್ಯಾಮೀಲ್ಯ ನೇತ್ರೇ ಸ್ಥಿತಃ ।**
**ಮುಗ್ಧಾ ಕುಟ್ಮಲಿತಾನನೇಂದು ದದತೀ ವಾಯುಂ ಸ್ಥಿತಾ ತತ್ರ ಸಾ**
**ಭ್ರಾಂತ್ಯಾ ಧೂರ್ತತಯಾಥವಾ ನತಿಮೃತೇ ತೇನಾನಿಶಂ ಚುಂಬಿತಾ ॥**

ಅನ್ಯವನಿತಾ-ಪರಸ್ತ್ರೀಯಿಂದ, ನಿಶ್ಶಂಕ-ಭಯವಿಲ್ಲದೆ, ದಷ್ಟ-ಕಚ್ಚಲ್ಪಟ್ಟ, ಅಧರಃ-ತುಟಿಯುಳ್ಳ, ಲೀಲಾ-ಆಟದ, ತಾಮರಸ-ತಾವರೆಯಿಂದ, ಆಹತಃ ಹೊಡೆಯಲ್ಪಟ್ಟ, ಕಶ್ಚಿತ್-ಒಬ್ಬಾನೊಬ್ಬ ನಾಯಕನು, ಕೇಸರ-ಕಮಲದ ಪರಾಗದಿಂದ, ದೂಷಿತ-ಕಾಣದಿರುವ, ಈಕ್ಷಣಃ ಇವ-ದೃಷ್ಟಿಯುಳ್ಳವನಂತೆ, ನೇತ್ರೇ-ತನ್ನೆರಡು ಕಣ್ಣುಗಳನ್ನು, ವ್ಯಾಮೀಲ್ಯ-ಮುಚ್ಚಿ, ಸ್ಥಿತಃ-ನಿಂತುಬಿಟ್ಟನು. ತತ್ರ-ಆ ಸಮಯದಲ್ಲಿ, ಸಾ ಮುಗ್ಧಾ-ಮುಗ್ಧಳಾದ ಅವನ ಪ್ರಿಯೆ, ಕುಟ್ಮಲಿತ ಮೊಗ್ಗಿನಂತೆ ಮಾಡಲ್ಪಟ್ಟ, ಆನನೇಂದು-ಚಂದ್ರನಂತಿರುವ ಮುಖವುಳ್ಳ ರೀತಿಯಲ್ಲಿ, ವಾಯುಂ-ಗಾಳಿಯನ್ನು, ದದತೀ-ಉಂಟುಮಾಡುತ್ತ (ಊದುತ್ತ), ಸ್ಥಿತಾ-ನಿಂತುಕೊಂಡಳು. ಭ್ರಾಂತ್ಯಾ-(ಯಾವುದನ್ನೂ ನೋಡದಿರುವ) ಭ್ರಾಂತಿಯಿಂದಲೋ, ಅಥವಾ-ಇಲ್ಲವೆ, ಧೂರ್ತತಯಾ-ಧೂರ್ತತನದಿಂದಲೋ, ನತಿಂ-|-ಋತೇ-ನಮಸ್ಕಾರವೇ ಮೊದಲಾದ ಪ್ರಸಾದನ ಕರ್ಮಗಳಿಲ್ಲದೆ, ತೇನ-ಆ ನಾಯಕನಿಂದ, ಅನಿಶಂ-ಬಹಳ ಹೊತ್ತು, ಚುಂಬಿತಾ-(ಆಕೆ) ಮುತ್ತಿಡಲ್ಪಟ್ಟಳು.

ಪರಸ್ತ್ರೀಯೊಬ್ಬಳಿಂದ ನಿರ್ಭಯವಾಗಿ ಕಚ್ಚಲ್ಪಟ್ಟ ತುಟಿಯುಳ್ಳ, ಒಬ್ಬಾನೊಬ್ಬ ನಾಯಕನು ಆಟದ ತಾವರೆಯಿಂದ ಹೊಡೆಯಲ್ಪಟ್ಟ ಕಮಲದ ಪರಾಗದಿಂದ ಮುಚ್ಚಿದ ದೃಷ್ಟಿಯುಳ್ಳವನಂತೆ ತನ್ನೆರಡು ಕಣ್ಣುಗಳನ್ನು ಮುಚ್ಚಿಕೊಂಡು ನಿಂತುಬಿಟ್ಟನು. ಆ ಸಮಯದಲ್ಲಿ ಮುಗ್ಧಳಾದ ಅವನ ಪ್ರಿಯೆ ವಿಶಾಲವಾದ ಚಂದ್ರನಂತೆ ದುಂಡಾದ ತನ್ನ

ಮುಖವನ್ನು ಮೇಗ್ಗಿನಂತೆ ಮಾಡಿಕೊಂಡು, ಆವನ ಕಣ್ಣುಗಳನ್ನು ತನ್ನ ಉಸಿರಿನಿಂದ ಊದತೊಡಗಿದಳು. ಭ್ರಾಂತಿಯನ್ನು ನಟಿಸಿಯೋ ಇಲ್ಲವೆ ಧೂರ್ತತನದಿಂದಲೋ ನಮಸ್ಕಾರವೇ ಮೊದಲಾದ ಪ್ರಸಾದನ ಕರ್ಮಗಳಿಲ್ಲದೆ ಅವನು ತನ್ನ ಪ್ರಿಯೆಯನ್ನು ಬಹುಕಾಲ ಮುತ್ತಿಟ್ಟನು.

೩೧

ಗರ್ಹಣೆ

**ಭವತು ವಿದಿತಂ ವ್ಯರ್ಥಾಲಾಪೈರಲಂ ಪ್ರಿಯ ಗಮ್ಯತಾಂ**
**ತನುರಪಿ ನತೇ ದೋಷೋಽಸ್ಮಾಕಂ ವಿಧಿಸ್ತು ಪರಾಙ್ಮುಖಃ ।**
**ತವ ಯದಿ ತಥಾರೂಢಂ ಪ್ರೇಮ ಪ್ರಪನ್ನಮಿಮಾಂ ದಶಾಂ**
**ಪ್ರಕೃತಿತರಲೇ ಕಾ ನಃ ಪೀಡಾ ಗತೇ ಹತಜೀವಿತೇ ॥**

ಪ್ರಿಯಃ-ನಲ್ಲನೆ, ಭವತು:ಆಗಲಿ (ಸರಿ). ವಿದಿತಂ ಎಲ್ಲವೂ ತಿಳಿಯಲ್ಪಟ್ಟಿತು. ವ್ಯರ್ಥಾಲಾಪೈಃ-ಉಪಯೋಗವಿಲ್ಲದ ಮಾತುಗಳಿಂದ, ಅಲಂ-ಸಾಕು. ಗಮ್ಯತಾಂ- (ನಿನ್ನ ಇಷ್ಟಬಂದ ಕಡೆಗೆ) ಪ್ರಯಾಣಮಾಡಲ್ಪಡಲಿ. ತೇ-ನಿನ್ನ, ದೋಷಃ-ಅಪರಾಧವು,ತನುಃ ಅಪಿ ಸ್ವಲ್ಪವೂ ಕೂಡ,ನ-ಇಲ್ಲ. ಅಸ್ಮಾಕಂ-ನಮ್ಮ, ವಿಧಿಸ್ತು-ಹಣೆಯಬರಹವಾದರೋ, ಪರಾಙ್ಮುಖಂ-ವಿರುದ್ಧವಾಗಿದೆ. ತವ-ನಿನ್ನ, ತಥಾರೂಢಂ-ಅಷ್ಟು ಉನ್ನತಾವಸ್ಥೆಯಲ್ಲಿದ್ದ, ಪ್ರೇಮ-ಪ್ರೀತಿ, ಇಮಾಂ-ಮತ್ತೊಬ್ಬಳಲ್ಲಿ ಅನುರಕ್ತವಾಗುವ ಈ, ದಶಾಂ-ಅವಸ್ಥೆಯನ್ನು, ಯದಿಪ್ರಪನ್ನಂ-ಹೊಂದಿದ್ದೇ ಆದರೆ, ಪ್ರಕೃತಿತರಲೇ-ಸ್ವಭಾವದಿಂದ ಚಂಚಲೆಯಾದ, ಹತಜೀವಿತೇ-ದುರ್ಭಾಗ್ಯಳಾದ ನಾನು, ಗತೇ-ನಷ್ಟವಾಗಿ ಹೋದರೆ, ನ-ನಮಗೆ, ಕಾ ಪೀಡಾ-ವ್ಯಥೆಯೇನಿದೆ ?

ನಲ್ಲನೆ, ಸರಿ, ನಿನ್ನನಡತೆಯೆಲ್ಲ ನನಗೆ ಅರಿವಾಯಿತು. ಉಪಯೋಗವಿಲ್ಲದ ಮಾತುಗಳಿಂದೇನು? ನಿನ್ನ ಇಷ್ಟಬಂದ ಎಡೆಗೆ ನೀನು ಪ್ರಯಾಣಮಾಡು. ಇಲ್ಲಿ ನಿನ್ನ ಅಪರಾಧ ಸ್ವಲ್ಪವೂ ಇಲ್ಲ. ಏಕೆಂದರೆ ಈಗ ವಿಧಿ ನಮಗೆ ವಿರುದ್ಧವಾಗಿದೆ. ಅಷ್ಟು ಉನ್ನತಾವಸ್ಥೆಯಲ್ಲಿದ್ದ ನಿನ್ನ ಪ್ರೇಮ ಮತ್ತೊಬ್ಬಳಲ್ಲಿ ಅನುರಕ್ತವಾಗುವ ಸ್ಥಿತಿಯನ್ನು ಹೊಂದಿದ್ದೇ ಆದರೆ, ಸ್ವಭಾವಚಂಚಲೆಯೂ, ದುರ್ಭಾಗ್ಯಳೂ ಆದ ನಾನು ನಷ್ಟಹೊಂದುವೆನಾದರೂ ವ್ಯಥೆಯೇಕೆ ?

೩೨
ಈರ್ಷ್ಯೆ

**ಅಜ್ಞಾನೇನ ಪರಾಙ್ಮುಖೀಂ ಪರಿಭವಾದಾಶ್ಲಿಷ್ಯ ಮಾಂ**
**ದುಃಖಿತಾಂ**
**ಕಿಂ ಲಬ್ಧಂ ಶಠ ದುರ್ನಯೇನ ನಯತಾ ಸೌಭಾಗ್ಯಮೇತಾಂ**
**ದಶಾಮ್ ।**
**ಪಶ್ಯೈತದ್ದಯಿತಾಕುಚವ್ಯತಿಕರೋನ್ಮೃಷ್ಟಾಂಗರಾಗಾರುಣಂ**
**ವಕ್ಷಸ್ತೇ ಮಲತೈಲಪಂಕಶಬಲೈರ್ವೇಣೀ ಪದೈರಂಕಿತಮ್ ॥**

ಶಠ-ವಂಚಕನೇ, ಪರಿಭವಾತ್-ತಿರಸ್ಕಾರದಿಂದ, ಪರಾಙ್ಮುಖೀಂ-ಇಷ್ಟವಿಲ್ಲದಿರುವ, ದುಃಖಿತಾಂ-ದುಃಖದಿಂದ ಪರಿತಪಿಸುತ್ತಿರುವ, ಮಾಂ-ನನ್ನನ್ನು, ಅಜ್ಞಾನೇನ-ವ್ಯಕ್ತಿಜ್ಞಾನವಿಲ್ಲದೆ (ಇಷ್ಟಳಾದ ಅನ್ಯಾಂಗನೆಯೆಂದು ತಿಳಿದು), ಆಶ್ಲಿಷ್ಯ-ಅಪ್ಪಿಕೊಂಡು, ಸೌಭಾಗ್ಯಂ-ನನ್ನ ಸದ್ಗುಣವನ್ನು, ದುರ್ನಯೇನ-ನಿನ್ನ ಕೆಟ್ಟ ನಡತೆಯಿಂದ, ಏತಾಂ-ಈ, ದಶಾಂ-ಅವಸ್ಥೆಯನ್ನಾಗಿ ಎಂದರೆ ಅವಸ್ಥೆಗೆ, ನಯತಾ ಗುರಿಪಡಿಸುವ ನಿನ್ನಿಂದ, ಕಿಂ ಲಬ್ಧಂ-ಏನು ತಾನೆ ಸಂಪಾದಿಸಲ್ಪಟ್ಟಿತು ? ಏತತ್-ಈ, ದಯಿತಾ-ನಿನ್ನ ಪ್ರಿಯ ತರುಣಿಯು, ಕುಚ-ಸ್ತನಗಳ, ವ್ಯತಿಕರ-ಸಂಬಂಧದಿಂದ, ಉನ್ಮೃಷ್ಟ-ಅಂಟಿಕೊಂಡಿರುವ, ಅಂಗರಾಗ-ಸುಗಂಧ ದ್ರವ್ಯಗಳಿಂದ, ಅರುಣಂ-ಕೆಂಪಾದ, ತೇ-ನಿನ್ನ, ವಕ್ಷಃ-ಎದೆ, ಮಲ-ಕೊಳಕಾದ, ತೈಲ ಪಂಕ-ಎಣ್ಣೆಯ ಗಸ್ಟಿನಿಂದ, ಶಬಲೈಃ-ವಿಚಿತ್ರವಾದ ಬಣ್ಣವುಳ್ಳ, ವೇಣೀ ಪದೈಃ-ಕೂದಲಿನ ರಾಶಿಯಿಂದ, ಅಂಕಿತಂ-ಗುರುತುಮಾಡಲ್ಪಟ್ಟಿದ್ದಾಯಿತು. ಪಶ್ಯ-ನೋಡು.

ಎಲೈ ವಂಚಕನೇ, ನಿನ್ನಲ್ಲಿರುವ ತಿರಸ್ಕಾರದಿಂದ ಇಷ್ಟವಿಲ್ಲದಿರುವ, ದುಃಖದಿಂದ ಪರಿತಪಿಸುತ್ತಿರುವ, ಋತು ಸ್ನಾನಕ್ಕೆ ಸಿದ್ಧಳಾಗಿ ನಿಂತ ನನ್ನನ್ನು ವ್ಯಕ್ತಿಜ್ಞಾನವಿಲ್ಲದೆ ಅಪ್ಪಿ ನಿನ್ನ ಕೆಟ್ಟನಡತೆಯಿಂದ ನನ್ನ ಶೀಲವನ್ನು ಹಾಳುಮಾಡಿ ನೀನು ಪಡೆದುದಾದರೂ ಏನು ? ನಿನ್ನ ಪ್ರಿಯ ತರುಣಿಯ ಕುಚಗಳಿಗೆತೊಡೆದ ಸುಗಂಧ ದ್ರವ್ಯಗಳಿಂದ ಕೆಂಪಾದ ನಿನ್ನೆದೆ ನನ್ನ ತಲೆಗೂದಲಿನ ಎಣ್ಣೆಯ ಗಸ್ಟಿನಿಂದ ಬಣ್ಣ ಬಣ್ಣವಾಗಿ ಗುರುತು ಮಾಡಲ್ಪಟ್ಟಿದ್ದನ್ನು ನೋಡು.

## ೧೧

### ಆಲಿಂಗನದ ಸುಖ

**ತಸ್ಯಾಃ ಸಾಂದ್ರವಿಲೇಪನಸ್ತನಯುಗಪ್ರಶ್ಲೇಷಮುದ್ರಾಂಕಿತಂ**
**ಕಿಂ ವಕ್ಷಶ್ಚರಣಾನತಿವ್ಯತಿಕರವ್ಯಾಜೇನ ಗೋಪಾಯ್ಯತೇ ।**
**ಇತ್ಯುಕ್ತೇ ಕ್ವ ತದಿತ್ಯುದೀರ್ಯ ಸಹಸಾ ತತ್ಸಂಪ್ರಮಾಷ್ಟುಂ ಮಯಾ**
**ಸಾಶ್ಲಿಷ್ಟಾ ರಭಸೇನ ತತ್ಸುಖವಶಾತ್ತಸ್ಯಾಶ್ಚ ತದ್ವಿಸ್ಮೃತಂ॥**

ತಸ್ಯಾಃ–ಆ ಸವತಿಯ, ಸಾಂದ್ರ-ದಟ್ಟವಾದ, ವಿಲೇಪನ-ಸುಗಂಧದ ಲೇಪವುಳ್ಳ, ಸ್ತನಯುಗ-ಎರಡು ಕುಚಗಳ, ಪ್ರಶ್ಲೇಷ ಅಪ್ಪಿಕೊಳ್ಳುವಿಕೆಯಲ್ಲಿ, ಮುದ್ರಾ-ಸ್ತನಮುದ್ರೆಯಿಂದ, ಅಂಕಿತಂ ಗುರುತುಮಾಡಲ್ಪಟ್ಟ, ವಕ್ಷಃ ನಿನ್ನ ಎದೆ, ಚರಣ-ಕಾಲಿಗೆ, ಆನತಿ-ನಮಸ್ಕರಿಸುವ, ವ್ಯತಿಕರ-ಸಂಬಂಧದ, ವ್ಯಾಜೇನ-ನೆಪದಿಂದ, ಗೋಪಾಯ್ಯತೇ ಕಿಂ-ಮುಚ್ಚಲ್ಪಡುವುದೇ ಏನು? ಇತಿ-ಹೀಗೆ, ಉಕ್ತೇ-(ಪ್ರೀತಿಯಿಂದ)ಹೇಳಲ್ಪಡಲು, ತತ್ ಅದು, ಕ್ವ-ಎಲ್ಲಿ? ಇತಿ-ಹೀಗೆ, ಉದೀರ್ಯ-ಹೇಳಿ, ತತ್-ಅದನ್ನು ಸಹಸಾ-ಒಡನೆಯೇ (ತತ್ಕ್ಷಣವೇ), ಸಂಪ್ರಮಾಷ್ಟುಂ-ಮರೆಮಾಜುವುದಕ್ಕೆ, ಮಯಾ-ನನ್ನಿಂದ, ರಭಸೇನ ವೇಗವಾಗಿ, ಸಾ-ಅವಳು, ಆಶ್ಲಿಷ್ಟಾ ಆಲಿಂಗಿಸಲ್ಪಟ್ಟಳು. ತತ್ಸುಖವಶಾತ್-ಆ ಆಲಿಂಗನದ ಸುಖದಿಂದ, ತಸ್ಯಾಃ-ಆ ನನ್ನ ಪ್ರಿಯೆಗೆ, ತತ್-ಆ ಸವತಿಯ ನೆನಪು (ಕೋಪವು), ವಿಸ್ಮೃತಂ-ಮರೆಯಲ್ಪಟ್ಟಿತು.

"ಆ ನನ್ನ ಸವತಿಯ ದಟ್ಟವಾದ ಸುಗಂಧಲೇಪನವುಳ್ಳ ಎರಡು ಸ್ತನಗಳನ್ನು ಅಪ್ಪಿದುದರಿಂದುಂಟಾದ ನಿನ್ನೆದೆಯ ಗುರುತನ್ನು ನನ್ನ ಕಾಲಿಗೆರಗುವ ನೆಪದಿಂದ ಮುಚ್ಚಬಯಸುವೆಯಾ?" ಎಂದು ನನ್ನ ಪ್ರಿಯತಮೆ ಹೇಳಲು, ನಾನು ಒಡನೆಯೇ 'ಎಲ್ಲಿ ಆ ಗುರುತು' ಎನ್ನುತ್ತ ಅದನ್ನು ಮರೆಮಾಚಲು ಅವಳನ್ನು ಆಲಿಂಗಿಸಿದೆನು. ಆ ಅಪ್ಪುಗೆಯ ಸುಖದಿಂದ ನನ್ನ ಪ್ರಿಯೆಗೆ ಸವತಿಯ ನೆನಪು ಅಳಿಸಿ ಹೋಯಿತು.

೩೪

ಗರ್ಹಣೆ

**ಪ್ರಾತಃಪ್ರಾತರುಪಾಗತೇನ ಜನಿತಾ ನಿರ್ನಿದ್ರತಾ ಚಕ್ಷುಷೋಃ**
**ಮಂದಾಯಾ ಮಮ ಗೌರವಂ ವ್ಯಪಗತಂ ಪ್ರೋತ್ಪಾದಿತಂ ಲಾಘವಂ ।**
**ಕಿಂ ತದ್ಯನ್ನ ಕೃತಂ ತ್ವಯಾ ಮರಣಭೀರ್ಮುಕ್ತಾ ಮಯಾ ಗಮ್ಯತಾಂ**
**ದುಃಖಂ ತಿಷ್ಠಸಿ ಯಚ್ಚ ಪಥ್ಯಮಧುನಾ ಕರ್ತಾಸ್ಮಿ ತಚ್ಛ್ರೋಷ್ಯಸಿ ॥**

ಮಂದಾಯಾಃ-ದುರದೃಷ್ಟಶಾಲಿನಿಯಾದ, ಮಮ-ನನ್ನ, ಚಕ್ಷುಷೋಃ-ಕಣ್ಣುಗಳಲ್ಲಿ, ನಿರ್ನಿದ್ರತಾ-ನಿದ್ರಾನಾಶವು, ಜನಿತಾ-ಉಂಟಾಯಿತು. ಗೌರವಂ-ದೇಹದ ಪುಷ್ಟಿ, ವ್ಯಪಗತಂ-ಹೊರಟುಹೋಯಿತು. ಲಾಘವಂ-ಶರೀರಕಾರ್ಶ್ಯವು. ಪ್ರೋತ್ಪಾದಿತಂ-ಹೆಚ್ಚಿತು. ಪ್ರಾತಃ ಪ್ರಾತಃ-ಪ್ರತಿ ನಿತ್ಯವೂ ಬೆಳಗಿನ ಹೊತ್ತಿನಲ್ಲಿ. ಉಪಾಗತೇನ-ನನ್ನ ಸಮೀಪಕ್ಕೆ ಬರುತ್ತಿರುವ, ತ್ವಯಾ-ನಿನ್ನಿಂದ, ಯತ್-(ಮೇಲೆ ಹೇಳಿದ ಕಷ್ಟಗಳ) ನಿವಾರಣೆ ಹೇಗೆ ಆಗಬೇಕೋ, ತತ್ ಹಾಗೆ ಅದು, ನ ಕೃತಂ ಕಿಂ-ನಡೆಸಲ್ಪಡಲಿಲ್ಲ ಅಲ್ಲವೆ? ಮಯಾ-ನನ್ನಿಂದಲಾದರೋ, ಮರಣಭೀಃ-ಮರಣದ ಭಯವು, ಮುಕ್ತಾ-ಬಿಡಲ್ಪಟ್ಟಿತು. ಗಮ್ಯತಾಂ-ಹೋಗೋಣವಾಗಲಿ. ದುಃಖಂ-ಬಹು ಕಷ್ಟದಿಂದ, ತಿಷ್ಠಸಿ-(ಇಷ್ಟು ಹೊತ್ತು) ನಿಂತಿದ್ದೀಯೆ. ಅಧುನಾ-ಈಗ, ಯತ್ ಚ ಪಥ್ಯಂ-ಯಾವ ಪಥ್ಯವನ್ನು (ರೋಗನಿವಾರಣೋಪಾಯ) ಕರ್ತಾ ಅಸ್ಮಿ-ಮಾಡುವವಳಾಗುವೆನೋ, ತತ್-ಅದನ್ನು, ಶ್ರೋಷ್ಯಸಿ-ಮುಂದೆ ಕೇಳುತ್ತೀಯೆ.

ನನ್ನ ದುರದೃಷ್ಟದಿಂದ ನಿದ್ರೆ ನಾಶವಾಯಿತು. ದೇಹದ ಪುಷ್ಟಿ ಹೊರಟುಹೋಯಿತು. ಶರೀರ ಕೃಶವಾಯಿತು. ಪ್ರತಿ ದಿನವೂ ಬೆಳಗಿನ ವೇಳೆಯಲ್ಲಿ ನೀನು ನನ್ನನ್ನು ಬಂದು ಉಪಚರಿಸುತ್ತಿಲ್ಲವೇ? ನನಗಿನ್ನು ಸಾವಿನ ಭಯವಿಲ್ಲ. ನೀನಿನ್ನು ಹೊರಡು. ಬಹುಕಷ್ಟದಿಂದ

ನೀನು ಇದುವರೆಗೆ ಇಲ್ಲಿ ನಿಂತಿರುವೆ. ಈ ರೋಗ ನಿವಾರಣೆಗಾಗಿ ಯಾವ ಔಷಧವನ್ನು ಮಾಡುವವಳಾಗುತ್ತೇನೆಯೋ ಅದನ್ನು ನೀನು ಮುಂದೆ ಕೇಳುವೆ.

೩೫

ಪ್ರೇಮದ ಅವನತಿ

**ತಥಾಭೂದಸ್ಮಾಕಂ ಪ್ರಥಮಮವಿಭಕ್ತಾ ತನುರಿಯಂ**
**ತತೋ ನು ತ್ವಂ ಪ್ರೇಯಾನಹಮಪಿ ಹತಾಶಾ ಪ್ರಿಯತಮಾ ।**
**ಇದಾನೀಂ ನಾಥಸ್ತ್ವಂ ವಯಮಪಿ ಕಳತ್ರಂ ಕಿಮಪರಂ**
**ಮಯಾಪ್ತಂ ಪ್ರಾಣಾನಾಂ ಕುಲಿಶಕಠಿನಾನಾಂ ಫಲಮಿದಂ ॥**

ಅಸ್ಮಾಕಂ-ನಮ್ಮಿಬ್ಬರ, ಇಯಂ-ಈ, ತನುಃ-ಶರೀರವು, ಪ್ರಥಮಂ-ಪ್ರಾರಂಭದಲ್ಲಿ, ಅವಿಭಕ್ತಾ-ವಿಭಾಗಿಸಲು ಸಾಧ್ಯವಿಲ್ಲದೆ ಒಂದೇ ಆಗಿ, ತಥಾ ಅದೇ ರೀತಿಯಲ್ಲಿಯೇ, ಅಭೂತ್-ಆಗಿತ್ತು. ತತಃ-ಸ್ವಲ್ಪ ಕಾಲಾನಂತರ, ತ್ವಂ-ನೀನು, ಪ್ರೇಯಾನ್ ಪ್ರೀತಿಗೆ ವಿಷಯನೂ, ಅಹಂ ಅಪಿ-ನಾನು ಕೂಡ, ಹತಾಶಾ-ಆಶಾಹೀನಳಾದ, ಪ್ರಿಯತಮಾ-ಪ್ರೀತ್ಯಾಸ್ಪದಳೂ, ಇದಾನೀಂ-ಈಗ, ತ್ವಂ-ನೀನು, ನಾಥಃ-ರಕ್ಷಕನು. ವಯಂ ಅಪಿ-ನಾವಾದರೋ, ಕಳತ್ರಂ-ಹೆಂಡತಿ. ಕಿಂ ಅಪರಂ-ಹೆಚ್ಚೇನು? (ಮುಂದೆ ಮುಂದೆ) ಮಯಾ-ನನ್ನಿಂದ, ಕುಲಿಶಕಠಿನಾನಾಂ-ವಜ್ರಾಯುಧದಂತೆ ಕಠಿನಗಳಾದ, ಪ್ರಾಣಾನಾಂ ಪ್ರಾಣಗಳಿಗೆ, ಇದಂ-ಈ, ಫಲಂ-ಪ್ರಯೋಜನವು, ಆಪ್ತಂ-ಹೊಂದಲ್ಪಟ್ಟಿತು.

ನಮ್ಮಿಬ್ಬರ ಈ ದೇಹ ಆರಂಭದಲ್ಲಿ ವಿಭಾಗಿಸಲು ಸಾಧ್ಯವಿಲ್ಲದೆ (ಅದ್ವೈತ)ಒಂದೇ ಆಗಿತ್ತು. ಸ್ವಲ್ಪಕಾಲಾನಂತರ(ದ್ವೈತಭಾವನೆ ಬಂದು) ನೀನು ಪ್ರಿಯತಮನೂ ನಾನು ಹತಾಶೆಯಾದ ಪ್ರಿಯತಮೆಯೂ ಆದೆವು. ಈಗ ನೀನು ನಾಥ; ನಾನು ಹೆಂಡತಿ. ಹೆಚ್ಚೇನು? ವಜ್ರಾಯುಧದಂತೆ ಕಠಿಣವಾದ ನನ್ನ ಪ್ರಾಣಗಳಿಗೆ ಈ ತೆರನಾದ ಫಲವುಂಟಾಯಿತು.

೩೬

**ಏಕಸ್ಮಿನ್ ಶಯನೇ ವಿಪಕ್ಷರಮಣೀನಾಮಗ್ರಹೇ ಮುಗ್ಧಯಾ**
**ಸದ್ಯಃ ಕೋಪಪರಾಙ್ಮುಖಂ ಗ್ಲಪಿತಯಾ ಚಾಟೂನಿ ಕುರ್ವನ್ನಪಿ**

**ಆವೇಗಾದವಧೀರಿತಃ ಪ್ರಿಯತಮಸ್ತೂಷ್ಣೀಂ ಸ್ಥಿತಸ್ತತ್ಕ್ಷಣಾತ್**
**ಮಾಭೂನ್ಮ್ಲಾನ ಇವೇತ್ಯಮಂದವಲಿತಗ್ರೀವಂ ಪುನರ್ವೀಕ್ಷಿತಃ॥**

ಪ್ರಿಯತಮಃ-ಅತ್ಯಂತ ಪ್ರಿಯನಾದ ಇನಿಯನು,ಏಕಸ್ಮಿನ್-ಒಂದೇ ಆದ, ಶಯನೇ-ಹಾಸಿಗೆಯಲ್ಲಿ, ವಿಪಕ್ಷರಮಣೀ-ತನ್ನ ಸವತಿಯ, ನಾಮ-ಹೆಸರನ್ನು, ಗೃಹೇ-ಹೇಳುವಾಗ, ಸದ್ಯಃ-ಕೂಡಲೇ, ಕೋಪ ಪರಾಙ್ಮುಖಂ-ಕೋಪದಿಂದ ತಿರುಗಿಸಿದ ಮುಖವುಳ್ಳ ರೀತಿಯಲ್ಲಿ, ಗ್ಲಪಿತಯಾ-ದುಃಖಗೊಂಡ, ಮುಗ್ಧಯಾ-ತರುಣಿಯಿಂದ, ಚಾಟೂನಿ-ಹಾಸ್ಯದ ಮಾತುಗಳನ್ನು,ಕುರ್ವನ್ನಪಿ-ಾಡುತ್ತಿದ್ದರೂ,ಆವೇಗಾತ್-(ಪರಸ್ತ್ರೀನಾಮ ಶ್ರವಣದ) ಉದ್ರೇಕದಿಂದ, ಅವಧೀರಿತಃ-ತಿರಸ್ಕೃತನಾದವನಾಗಿ, ತೂಷ್ಣೀಂ-ಮಾತನಾಡದೆ, ಸ್ಥಿತಃ-ಕುಳಿತುಬಿಟ್ಟನು. ತತ್ಕ್ಷಣಾತ್-ಕೂಡಲೇ, ಮ್ಲಾನಃ ಇವ ಮಂಕಾದವನಂತೆ, ಮಾಭೂತ್-ಆಗಬಾರದು, ಇತಿ-ಹೀಗೆ (ಹೇಳಲ್ಪಡಲು), ಅಮಂದ-ಚಟುವಟಿಕೆಯಿಂದ, ವಲಿತ-ತಿರುಗಿಸಿದ, ಗ್ರೀವಂ-ಕಂಠಪ್ರದೇಶವುಳ್ಳ ಭಂಗಿಯಲ್ಲಿ, ಪುನಃ-ಮತ್ತೆ, ವೀಕ್ಷಿತಃ-ನೋಡಲ್ಪಟ್ಟನು.

ಪ್ರಿಯತಮನು ತನ್ನ ಇನಿಯಳೊಡನೆ ಒಂದೇ ಹಾಸಿಗೆಯಲ್ಲಿರುತ್ತ ಪರಸ್ತ್ರೀಯ ಹೆಸರನ್ನು ನುಡಿಯಲು ಅದರಿಂದ ಕೂಡಲೇ ಕೋಪಗೊಂಡ ಆ ತರುಣಿ ಮುಖವನ್ನು ತಿರುಗಿಸಿಕೊಂಡಳು. ಹೆರಹೆಣ್ಣಿನ ಹೆಸರನ್ನು ಕೇಳಿ ದುಃಖಗೊಂಡ ತನ್ನ ಇನಿಯಳನ್ನು ವಿನೋದದ ಮಾತುಗಳಿಂದ ಸಮಾಧಾನಪಡಿಸಲು ಸಮರ್ಥನಾಗದೆ ಉದ್ರೇಕಗೊಂಡ ಅವನು ಸುಮ್ಮನೆ ಕುಳಿತುಬಿಟ್ಟನು. ಇದನ್ನರಿತ ಅವಳು 'ವ್ಯರ್ಥವಾಗಿ ಉತ್ಸಾಹಹೀನವಾಗಬೇಡ' ಎಂದು ನುಡಿದು ಮೆಲ್ಲಗೆ ಕತ್ತನ್ನು ತಿರುಗಿಸಿ ಅವಳು ತನ್ನ ಇನಿಯನನ್ನು ನೋಡಿದಳು.

## ೩೭

## ಹುಸಿ ಮುನಿಸು

**ಕಾಂಚ್ಯಾ ಗಾಢತರಾವನದ್ಧವಸನಪ್ರಾಂತಾ ಕಿಮರ್ಥಂ ಪುನ**
**ರ್ಮುಗ್ಧಾಕ್ಷೀ ಸ್ವಪಿತೀತಿ ತತ್ಪರಿಜನಂ ಸ್ವೈರಂ ಪ್ರಿಯೇ ಪೃಚ್ಛತಿ**

**ಮಾತಃ ಸ್ವಪ್ತುಮಪೀಹ ವಾರಯತಿ ಮಾಮಿತ್ಯಾಹತಕ್ರೋಧಯಾ**
**ಪರ್ಯಸ್ಯ ಸ್ವಪನಚ್ಛಲೇನ ಶಯನೇ ದತ್ತೋವಕಾಶಸ್ತಯಾ ||**

ಮುಗ್ಧಾಕ್ಷೀ-ಮುಚ್ಚಿದ ಕಣ್ಣುಗಳುಳ್ಳ ಈಕೆ, ಕಾಂಚ್ಯಾ-ನಡುಪಟ್ಟಿಯಿಂದ, ಗಾಢತರ-ಅತ್ಯಂತ ಬಿಗಿಯಾಗಿ, ಅವನದ್ಧ-ಕಟ್ಟಲ್ಪಟ್ಟ, ವಸನ-ವಸ್ತ್ರದ, (ಸೀರೆಯ) ಪ್ರಾಂತಾ-ಸೆರಗುಳ್ಳವಳಾಗಿ, ಕಿಮರ್ಥಂ-ಏತಕ್ಕಾಗಿ, ಸ್ವಪಿತಿ-ನಿದ್ದೆಮಾಡುತ್ತಿರುವಳು ? ಇತಿ ಹೀಗೆಂದು, ತತ್ಪರಿಜನಂ-ಆಕೆಯ ಸೇವಕಿಯನ್ನು, ಪ್ರಿಯೇ-ಇನಿಯನು, ಸ್ವೈರಂ-ಧೈರ್ಯವಾಗಿ, ಪೃಚ್ಛತಿ (ಸತಿ) ಕೇಳುತ್ತಿರಲಾಗಿ,(ಆಗ ಅವನ ಪ್ರಿಯೆ) ಮಾತಃ-ಅಮ್ಮಾ, ಸ್ವಪ್ತುಂ ಅಪಿ-ನಿದ್ರಿಸುವುದಕ್ಕೂ ಕೂಡ, ಮಾಂ-ನನ್ನನ್ನು, ಇಹ-ಇಲ್ಲಿ, ವಾರಯತಿ-ತಡೆಯುತ್ತಾನೆ. ಇತಿ-ಹೀಗೆಂದು, ಆಹತಕ್ರೋಧಯಾ-ಹೆಚ್ಚಾದ ಕೋಪವುಳ, ತಯಾ-ಆ ನಲ್ಲೆಯಿಂದ, ಸ್ವಪನಚ್ಛಲೇನ-ನಿದ್ರೆ ಮಾಡುವ ನೆವದಿಂದ, ಪರ್ಯಸ್ಯ-ಹೊರಳಿ, ಶಯನೇ-ತನ್ನ ಹಾಸಿಗೆಯಲ್ಲಿ, ಅವಕಾಶಃ-(ಇನಿಯನು ಮಲಗಲು) ಸ್ಥಳವು, ದತ್ತಃ-ಕೊಡಲ್ಪಟ್ಟಿತು.

'ಈಕೆ ಕಣ್ಣುಗಳನ್ನು ಮುಚ್ಚಿಕೊಂಡು, ಸೀರೆಯ ಸೆರಗನ್ನು ನಡುಪಟ್ಟಿಯಿಂದ ಬಿಗಿಯಾಗಿ ಕಟ್ಟಿ ಏತಕ್ಕಾಗಿ ನಿದ್ರಿಸುತ್ತಿರುವಳು ?' ಎಂದು ಇನಿಯನು ಪರಿಜನವನ್ನು ಕೇಳುತ್ತಿರಲು ಆಗ ಅವನ ಪ್ರಿಯೆ 'ಅಮ್ಮ, ಇಲ್ಲಿ ನಿದ್ರಿಸಲೂ ಕೂಡ ಅವಕಾಶವಿಲ್ಲವೆ ?' ಎಂದು ಹೆಚ್ಚಾದ ಕೋಪದಿಂದ, ಆಕೆ ನಿದ್ರೆಮಾಡುವ ನೆಪದಿಂದ ಹೊರಳಿ ತನ್ನ ಹಾಸಿಗೆಯಲ್ಲಿ ಇನಿಯನು ಮಲಗಿಕೊಳ್ಳಲು ಅವಕಾಶವನ್ನು ಕಲ್ಪಿಸಿ ಕೊಟ್ಟಳು.

೩೮

ಲಜ್ಜಾಪಹರಣ

**ಸುಪ್ತೋಽಯಂ ಸಖಿ ಸುಪ್ಯತಾಮಿತಿ ಗತಾಃ ಸಖ್ಯಸ್ತತೋಽನಂತರಂ**
**ಪ್ರೇಮಾವೇಶಿತಯಾ ಮಯಾ ಸರಲಯಾ ನ್ಯಸ್ತಂ ಮುಖಂ ತನ್ಮುಖೇ**

**ಜ್ಞಾತೇಲೀಕನಿಮೀಲನೇ ನಯನಯೋರ್ಧೂರ್ತಸ್ಯ ರೋಮಾಂಚತೋ**
**ಲಜ್ಜಾಸೀನ್ಮಮ ತೇನ ಸಾಪ್ಯಪಹೃತಾ ತತ್ಕಾಲಯೋಗ್ಯೈಃ ಕ್ರಮೈಃ ॥**

ಸಖಿ-ಗೆಳತಿಯೇ, ಅಯಂ-ಈ ನಿನ್ನ ಪ್ರಿಯನು, ಸುಪ್ತಃ-ಮಲಗಿಕೊಂಡನು. ಸುಪ್ಯತಾಂ-(ನಿನ್ನಿಂದಲೂ) ಮಲಗಲ್ಪಡಲಿ. ಇತಿ ಹೀಗೆ ಹೇಳುತ್ತಾ, ಸಖ್ಯಃ-(ನನ್ನ) ಗೆಳತಿಯರು, ತತಃ-ಆಮೇಲೆ, ಗತಾಃ-ಹೊರಟು ಹೋದರು. ಅನಂತರಂ-ಅವರು ಹೋದೊಡನೆ, ಪ್ರೇಮಾವೇಶಿತಯಾ-ಪ್ರಿಯನ ಮೇಲಿನ ಅನುರಾಗದಿಂದ ಪೀಡಿತಳಾದ, ಸರಳಯಾ-ಕಪಟವನ್ನರಿಯದ, ಮಯಾ-ನನ್ನಿಂದ, ಮುಖಂ--ನನ್ನ ಮುಖ, ತನ್ಮುಖೇ-ಅವನ ಮುಖದ ಮೇಲೆ, ನ್ಯಸ್ತಂ (ಮೆಲ್ಲಗೆ) ಇಡಲ್ಪಟ್ಟಿತು. ಧೂರ್ತಸ್ಯ ಚತುರನಾದ ಆ ನನ್ನ ಪ್ರಿಯನ, ನಯನಯೋಃ-ಕಣ್ಣುಗಳೆರಡರಲ್ಲಿಯೂ, ಅಲೀಕ ನಿಮೀಲನೇ--ಸುಳ್ಳಾದ ಮುಚ್ಚುವಿಕೆ, ರೋಮಾಂಚತಃ-ರೋಮಾಂಚನದಿಂದ, ಜ್ಞಾತೇ-(ನನಗೆ) ತಿಳಿಯಲ್ಪಡಲಾಗಿ, ಮಮ-ನನಗೆ, ಲಜ್ಜಾ-ನಾಚಿಕೆ, ಆಸೀತ್-ಉಂಟಾಯಿತು. ಅನಂತರ, ತೇನ-ಅವನಿಂದಲಾದರೋ, ತತ್ಕಾಲಯೋಗ್ಯೈಃ-ಆ ಸಮಯಕ್ಕೆ ಉಚಿತವಾದ, ಕ್ರಮೈಃ ನಡತೆಗಳಿಂದ, ಸಾ ಅಪಿ-ಆ ನಾಚಿಕೆಯೂ ಕೂಡ, ಅಪಹೃತಾ-ಹೋಗಲಾಡಿಸಲ್ಪಟ್ಟಿತು.

'ಎಲೆ ಗೆಳತಿ, ಈ ನಿನ್ನ ಪ್ರಿಯನು ಮಲಗಿಕೊಂಡನು. ನೀನೂ ಮಲಗಿಕೊ' ಎಂದು ಹೇಳುತ್ತ ಗೆಳತಿಯರು ಹೊರಟು ಹೋದರು. ಅನಂತರ ಪ್ರಿಯನ ಮೇಲಿದ್ದ ಅನುರಾಗದಿಂದ ಕಪಟವನ್ನರಿಯದ ನಾನು ನನ್ನ ಮುಖವನ್ನು ಮೆಲ್ಲನೆ ಪ್ರಿಯನ ಮುಖದ ಮೇಲಿಟ್ಟೆನು. ನನ್ನ ಮುಖದ ಸ್ಪರ್ಶದಿಂದ ರೋಮಾಂಚಗೊಂಡ ಅವನು ನಟನೆಗಾಗಿ ಕಣ್ಣುಮುಚ್ಚಿರುವುದನ್ನು ತಿಳಿದು ನನಗೆ ನಾಚಿಕೆಯಾಯಿತು. ಆ ಬಳಿಕ ನನ್ನ ಪ್ರಿಯತಮನು ಆ ಸಮಯಕ್ಕೆ ಉಚಿತವಾದ ನಡತೆಯಿಂದ ನನ್ನ ನಾಚಿಕೆಯನ್ನು ಪರಿಹರಿಸಿದನು.

೩೯

ಪ್ರೇಮದ ನಾಶ

**ಕೋಪೋ ಯತ್ರ ಭ್ರುಕುಟಿರಚನಾ ನಿಗ್ರಹೋ ಯತ್ರ ಮೌನಂ**
**ಯತ್ರಾನ್ಯೋನ್ಯಸ್ಮಿತಮನುನಯೋ ದೃಷ್ಟಿಪಾತಃ ಪ್ರಸಾದಃ ।**
**ತಸ್ಯ ಪ್ರೇಮ್ಣಸ್ತದಿದಮಧುನಾ ವೈಶಸಂ ಪಶ್ಯ ಜಾತಂ**
**ತ್ವಂ ಪಾದಾಂತೇ ಲುಠಸಿ ನ ಚ ಮೇಮನ್ಯುಮೋಕ್ಷಃ ಖಲಾಯಾಃ**

ಯತ್ರ-ಯಾವ ನಮ್ಮಿಬ್ಬರ (ಅನುರಾಗದಲ್ಲಿ,) ಭ್ರುಕುಟಿರಚನಾ-ಹುಬ್ಬುಗಂಟಿಕ್ಕುವಿಕೆಯೇ, ಕೋಪಃ ಕೋಪ. ಯತ್ರ-ಯಾವ ಪ್ರಣಯದಲ್ಲಿ, ಮೌನಂ-ಮಾತನಾಡದಿರುವಿಕೆಯೇ, ನಿಗ್ರಹ-ಶಿಕ್ಷೆ. ಯತ್ರ-ಯಾವ ನಮ್ಮಿರ್ವರ ಪ್ರೇಮದಲ್ಲಿ, ಅನ್ಯೋನ್ಯಸ್ಮಿತಂ-ನಮ್ಮಿಬ್ಬರ ಮುಗುಳುನಗೆ, ಅನುನಯಃ-ಅನುನಯವಾಗಿತ್ತು. ದೃಷ್ಟಿಪಾತಃ-ಪ್ರೀತಿಯ ಕುಡಿನೋಟ, ಪ್ರಸಾದಃ-ಅನುಗ್ರಹವಾಗಿತ್ತು. ತಸ್ಯ-ಆ ರೀತಿಯ, ಪ್ರೇಮ್ಣಃ-ಪ್ರೀತಿಗೆ, ತತ್ ಇದಂ-ಈ ತೆರನಾದ, ವೈಶಸಂ-ನಾಶ, ಅಧುನಾ-ಈಗ, ಜಾತಂ-ಉಂಟಾಯಿತು ಪಶ್ಯ ನೋಡು. ತ್ವಂ-ನೀನು, ಪಾದಾಂತೇ-ನನ್ನ ಕಾಲಬಳಿಯಲ್ಲಿ, ಲುಠಸಿ-ಹೊರಳಾಡುತ್ತಿರುವೆ. ಖಲಾಯಾಃ-ಕಠಿಣ ಹೃದಯಳಾದ, ಮೇ-ನನ್ನ, ಮನ್ಯುಮೋಕ್ಷಃ-ಕೋಪದ ಶಾಂತಿ, ನ ಚ-ಆಗಲೇ ಇಲ್ಲ.

ನಮ್ಮಿಬ್ಬರ ಅನುರಾಗದಲ್ಲಿ ಹುಬ್ಬುಗಂಟಿಕ್ಕುವಿಕೆಯೇ ಕೋಪ, ಮೌನವೇ ಶಿಕ್ಷೆ, ಮುಗುಳುನಗೆಯೇ ಅನುನಯ, ಪ್ರೀತಿಯ ಕುಡಿನೋಟವೇ ಪ್ರಸಾದ ಆಗಿದ್ದವು. ಹೀಗಿದ್ದ ನಮ್ಮ ಪ್ರೇಮಕ್ಕೆ ಈ ತೆರನಾದ ನಾಶ ಈಗ ಉಂಟಾಗಿದೆ. ನೀನು ನನ್ನ ಪದತಲದಲ್ಲಿ ಹೊರಳಾಡುತ್ತಿರುವೆ. ಕಠಿಣ ಹೃದಯಳಾದ ನನಗಾದರೋ ಕೋಪವೇ ಶಾಂತವಾಗಲೊಲ್ಲದು.

೪೦

ಬಾಷ್ಪ ಮೋಕ್ಷ

**ಸುತನು ಜಹಿಹಿ ಮೌನಂ ಪಶ್ಯ ಪಾದಾನತಂ ಮಾಂ**
**ನ ಖಲು ತವ ಕದಾಚಿತ್ಕೋಪ ಏವಂ ವಿಧೋಽಭೂತ್ ।**

**ಇತಿ ನಿಗದತಿ ನಾಥೇ ತಿರ್ಯಗಾಮೀಲಿತಾಕ್ಷ್ಯಾ**
**ನಯನಜಲಮನಲ್ಪಂ ಮುಕ್ತಮುಕ್ತಂ ನ ಕಿಂಚಿತ್ ||**

ಸುತನು-ಸುಂದರಾಂಗಿ, ಮೌನಂ-ಮಾತನಾಡದಿರುವಿಕೆಯನ್ನು, ಜಹಿಹಿ-ಬಿಡು. ಪಾದಾನತಂ-ನಿನ್ನ ಕಾಲಿಗೆರಗಿರುವ, ಮಾಂ-ನನ್ನನ್ನು, ಪಶ್ಯ ನೋಡು ಕದಾಚಿತ್-ಹಿಂದೆ ಯಾವಾಗಲೂ, ತವ ನಿನ್ನ, ಕೋಪಃ-ಕೋಪವು, ಏವಂ ವಿಧಃ-ಈ ರೀತಿಯಾಗಿ, ನ ಅಭೂತ್ ಖಲು-ಆಗಿರಲಿಲ್ಲವಷ್ಟೆ. ಇತಿ-ಹೀಗೆಂದು, ನಾಥೇ ಪ್ರಿಯನು. ನಿಗದತಿ (ಸತಿ) ಹೇಳುತ್ತಿರಲಾಗಿ, ತಿರ್ಯಕ್-ವಕ್ರವಾಗಿ, ಆಮೀಲಿತ-ಸ್ವಲ್ಪ ಮುಚ್ಚಿದ, ಅಕ್ಷ್ಯಾ-ಕಣ್ಣುಗಳುಳ್ಳ ಅವಳಿಂದ, ಅನಲ್ಪಂ-ಹೆಚ್ಚಾದ, ನಯನಜಲಂ ಕಣ್ಣೀರು, ಮುಕ್ತಂ ಬಿಡಲ್ಪಟ್ಟಿತು. ಕಿಂಚಿತ್-ಸ್ವಲ್ಪವೂ, ನ ಉಕ್ತಂ-ಮಾತನಾಡಲ್ಪಡಲಿಲ್ಲ.

'ಎಲೈ ಚೆಲುವೆ, ಮೌನವನ್ನು ಬಿಡು. ನಿನ್ನ ಕಾಲಿಗೆರಗಿರುವ ನನ್ನನ್ನು ನೋಡು. ಈ ಮೊದಲು ನಿನ್ನ ಕೋಪ ಈ ತೆರನಾದ ಉತ್ಕಟಾವಸ್ಥೆಯನ್ನು ಏರಿರಲಿಲ್ಲವಲ್ಲ!' ಎಂದು ಇನಿಯನು ನುಡಿಯುತ್ತಿರಲು, ಸ್ವಲ್ಪ ಮುಚ್ಚಿದ ಕೊಂಕುಕಣ್ಣಿನಿಂದ ಪ್ರಿಯೆ ಬಹುವಾಗಿ ನೀರನ್ನು ಸುರಿಸಿದಳು; ಆದರೆ ಮಾತನಾಡಲಿಲ್ಲ.

೪೧

ಪ್ರಣಯ ಕೋಪದ ಶಮನ

**ಪಾದಾಸಕ್ತೇ ಸುಚಿರಮಿಹ ತೇ ವಾಮತಾ ಕೈವ ಮುಗ್ಧೇ**
**ಮಂದಾರಂಭೇ ಪ್ರಣಯಿನಿ ಜನೇ ಕೋಪನಾಥೋಪರಾಧಃ |**
**ಇತ್ಥಂ ತಸ್ಯಾಃ ಪರಿಜನಕಥಾ ಕೋಮಲೇ ಕೋಪವೇಗೇ**
**ಬಾಷ್ಪೋದ್ಭೇದೈಸ್ತದನು ಸಹಸಾ ನ ಸ್ಥಿತಂ ನ ಪ್ರವೃತ್ತಂ ||**

ಮುಗ್ಧೇ-ಎಲೆ ಏನನ್ನೂ ಅರಿಯದ ಹೆಣ್ಣೆ, ಪಾದಾಸಕ್ತೇ-(ಪ್ರಿಯನು)ನಿನ್ನ ಕಾಲಿಗೆ ನಮಸ್ಕರಿಸಲು, ತೇ-ನಿನ್ನ, ವಾಮತಾ-ವಿರುದ್ಧವಾಗಿರುವಿಕೆ, ರುಚಿರಂ ಬಹುಕಾಲ, ಇಹ ಇಲ್ಲಿ, ಕಾ ಏವ-ಎಂತಹುದು! ಪ್ರಣಯಿನಿ-ಹೆಚ್ಚಾದ ಪ್ರೇಮವುಳ್ಳ, ಜನೇ ಇನಿಯನು, ಮಂದಾರಂಭೇ-ನಮ್ರವಾದ ಕ್ರಿಯೆಗಳುಳ್ಳವನಾಗಲು, ಅಪರಾಧೋಪರಾಧಃ ತಪ್ಪಿನ

ಆಕ್ಷೇಪಣೆ, ಕಃ-ಎಂಥಾದ್ದು ? ಇತ್ಥಂ-ಹೀಗೆ, ತಸ್ಯಾಃ-ಆ ನಾಯಿಕೆಯ ಕೋಪವೇಗೇ-ಕೋಪದ ಆವೇಶವು, ಪರಿಜನಕಥಾಕೋಮಲೇ-ದಾಸೀ ಜನದ ಮಾತಿನಿಂದ ಸಡಿಲವಾಗಲು, ತದನು-ಅನಂತರ, ಸಹಸಾ-ಕೂಡಲೇ, ಬಾಷ್ಪೋದ್ಭೇದೈಃ ಕಣ್ಣೀರಿನ ಪ್ರವಾಹದಿಂದ, ನ ಸ್ಥಿತಂ-ನಿಲ್ಲಲ್ಪಡಲಿಲ್ಲ, (ಮತ್ತು) ನ ಪ್ರವೃತ್ತಂ-ಮುಂದುವರಿಯಲೂ ಇಲ್ಲ.

'ಎಲೇ ಮುಗ್ಧೆ, ಪ್ರಿಯನು ನಿನ್ನ ಕಾಲಿಗೆರಗಿರುವಾಗ ಅವನ ವಿಷಯದಲ್ಲಿ ಬಹುಕಾಲ ನೀನು ಕೋಪದಿಂದಿರುವುದರಿಂದ ಏನು ಫಲ? ನಿನ್ನ ವಿಷಯದಲ್ಲಿ ಅತಿಶಯವಾದ ಪ್ರೇಮವುಳ್ಳ ನಿನ್ನ ಇನಿಯನು ನಮ್ರವಾದ ನಡತೆಯುಳ್ಳವನಾಗಿರುವಾಗ ಅವನ ವಿಷಯದಲ್ಲಿ ತಪ್ಪಿನ ಆರೋಪಣೆಯಿಂದ ಏನು ಪ್ರಯೋಜನ?' ಹೀಗೆ ಆ ನಾಯಿಕೆಯ ಕೋಪದ ಆವೇಗ ಪರಿಜನರ ಮೃದುನುಡಿಗಳಿಂದ ಸಡಿಲವಾಗಲು ತಕ್ಷಣವೇ ನಾಯಿಕೆಯ ಕಣ್ಣು ನೀರಿನಿಂದ ತುಂಬಿಕೊಂಡಿತು.

೪೨

ನಮಗಿಂತಲೂ ಕೋಪವೇ ನಿನಗೆ ಪ್ರಿಯನಾಯಿತಲ್ಲವೇ ?

**ಕಪೋಲೇ ಪತ್ರಾಲೀ ಕರತಲನಿರೋಧೇನ ಮೃದಿತಾ**
**ನಿಪೀತೋ ನಿಃಶ್ವಾಸೈರಯಮಮೃತಹೃದ್ಯೋಽಧರರಸಃ ।**
**ಮುಹುಃ ಕಂಠೇ ಲಗ್ನಸ್ತರಳಯತಿ ಬಾಷ್ಪಃ ಸ್ತನತಟಂ**
**ಪ್ರಿಯೋ ಮನ್ಯುರ್ಜಾತಸ್ತವ ನಿರನುರೋಧೇ ನ ತು ವಯಂ ॥**

ನಿರನುರೋಧೇ-ಅನುಸರಣೆಯಿಲ್ಲದ ಕಠಿನ ಮನಸ್ಸುಳ್ಳೇ, ಕಪೋಲೇ-ನಿನ್ನ ಕೆನ್ನೆಯಲ್ಲಿರುವ, ಪತ್ರಾಲೀ (ತಣ್ಣಗಾಗುವ) ಚಿಗುರೆಲೆಗಳು, ಕರತಲ ಅಂಗೈಯ್ಯ, ನಿರೋಧೇನ-ಒತ್ತುವಿಕೆಯಿಂದ, ಮೃದಿತಾ-ಉಜ್ಜಲ್ಪಟ್ಟವು. ಅಯಂ-ಈ, ಅಮೃತಹೃದ್ಯಃ-ಅಮೃತದ ಸವಿಯನ್ನು ತಿರಸ್ಕರಿಸುವ, ಅಧರರಸಃ-ತುಟಿಯ ದ್ರವವು, ನಿಃಶ್ವಾಸೈಃ ನಿಟ್ಟುಸಿರುಗಳಿಂದಲೇ, ನಿಪೀತಃ-ಕುಡಿಯಲ್ಪಟ್ಟಿತು. (ಒಣಗಿಸಲ್ಪಟ್ಟಿತು) ಬಾಷ್ಪಃ ಕಣ್ಣೀರು, ಮುಹುಃ-ಬಾರಿ ಬಾರಿಗೂ, ಕಂಠೇ-ನಿನ್ನ ಕತ್ತಿನಲ್ಲಿ, ಲಗ್ನಃ-ಅಂಟಿಕೊಂಡು, (ಆಲಿಂಗಿಸಿಕೊಂಡು) ಸ್ತನತಟಂ-ಕುಚಗಳ ಪ್ರದೇಶವನ್ನು, ತರಳಯತಿ-ಅಲುಗಿಸುತ್ತದೆ. ತವ-ನಿನಗೆ, ಮನ್ಯುಃ-ಕೋಪವು, ಪ್ರಿಯಃ-

ಪ್ರಿಯನಾಗಿ, ಜಾತಃ-ಉಂಟಾಯಿತು. ವಯಂ ತು-ನಾವಾದರೋ,ನ-ಅಲ್ಲ.

ಎಲೆ ನಿಷ್ಠುರ ಹೃದಯಳೇ, ನಿನ್ನ ಕೆನ್ನೆಯಲ್ಲಿರುವ ಚಿಗುರೆಲೆಗಳು ಅಂಗೈಯನ್ನು ಕೆನ್ನೆಯ ಮೇಲೆ ಒತ್ತುವುದರಿಂದ ಉಜ್ಜಲ್ಪಟ್ಟವೆ. ಅಮೃತದ ಸವಿಯನ್ನು ತಿರಸ್ಕರಿಸುವ ನಿನ್ನ ಅಧರರಸ ನಿಟ್ಟುಸಿರಿನಿಂದ ಕುಡಿಯಲ್ಪಟ್ಟಿತು. (ನಿನ್ನ ತುಟಿಗಳು ಒಣಗಿವೆ ಎಂದು ಭಾಗ) ನಿನ್ನ ಕಣ್ಣೀರು ಕತ್ತನ್ನು ಅಪ್ಪಿಕೊಂಡು ನಿನ್ನ ಎದೆಯನ್ನು ಅಲುಗಿಸುತ್ತಿದೆ. ನಿನಗೆ ನಮಗಿಂತಲೂ ಕೋಪವೇ ಪ್ರಿಯನಂತಾಯಿತಲ್ಲವೇ ?

೬೩

ಪ್ರಿಯೆ, ನನ್ನ ಅಪರಾಧಕ್ಕೆ ತಕ್ಕ ಶಿಕ್ಷೆಯನ್ನು ವಿಧಿಸು

**ಕಠಿನಹೃದಯೇ ಮುಂಚ ಭ್ರಾಂತಿಂ ವ್ಯಲೀಕಕಥಾಶ್ರಿತಾಂ**
**ಪಿಶುನವಚನೈರ್ದುಃಖಂ ನೇತುಂ ನ ಯುಕ್ತಮಿಮಂ ಜನಂ**
**ಕಿಮಿದಮಥವಾ ಸತ್ಯಂ ಮುಗ್ಧೇ ತ್ವಯಾದ್ಯ ವಿನಿಶ್ಚಿತಂ**
**ಯದಭಿರುಚಿತಂ ತನ್ಮೇ ಕೃತ್ವಾ ಪ್ರಿಯೇ ಸುಖಮಾಸ್ಯತಾಂ ||**

ಹೇ ಕಠಿನಹೃದಯೇ-ಕ್ರೂರಮನಸ್ಸಿನವಳೇ, ವ್ಯಲೀಕಕಥಾಶ್ರಿತಾಂ -ಕಟ್ಟುಕಥೆಯಿಂದ ಕೂಡಿರುವ, ಭ್ರಾಂತಿಂ ಅಜ್ಞಾನವನ್ನು, ಮುಂಚ-ಬಿಡು. ಪಿಶುನವಚನೈಃ-ಚಾಡಿಕೋರರ ಮಾತುಗಳಿಂದ, ಇಮಂ-ಈ, ಜನಂ-ಏನೂ ಅರಿಯದ (ನನ್ನನ್ನು), ದುಃಖಂ-ದುಃಖವನ್ನು ನೇತುಂ ಹೊಂದಿಸುವುದಕ್ಕೆ ಯುಕ್ತಂ-ನ್ಯಾಯವು, ನ-ಇಲ್ಲ. ಅಥವಾ-ಒಂದುವೇಳೆ, ಮುಗ್ಧೇ-ಯುವತಿಯೇ (ದೋಷರಹಿತಳೇ), ತ್ವಯಾ-ನಿನ್ನಿಂದ, ಇದಂ-ಈ ನನ್ನ ಅಪರಾಧವು, ಸತ್ಯಂ-ನಿಜವೆಂದು, ವಿನಿಶ್ಚಿತಂ ಕಿಂ-ನಿಶ್ಚಯಿಸಲ್ಪಟ್ಟಿದ್ದೇ ಆದರೆ, ಅದ್ಯ-ಈಗ, ಪ್ರಿಯೇ-ಪ್ರೀತಿಪಾತ್ರಳೇ, ಯತ್-ಯಾವ ಶಿಕ್ಷೆ, ಅಭಿರುಚಿತಂ-(ನಿನಗೆ) ಇಷ್ಟವಾಗುವುದೋ, ತತ್-ಅದನ್ನು, ಮೇ-ನನಗೆ, ಕೃತ್ವಾ-ಮಾಡಿ, ಸುಖಂ-ಸುಖವಾಗಿ, ಆಸ್ಯತಾಂ-ಕುಳಿತುಕೋ.

ಕಠಿನ ಹೃದಯಳಾದವಳೇ, ನನ್ನ ವಿಷಯದಲ್ಲಿ ನೀನು ಕೇಳಿರುವ ಕಟ್ಟುಕಥೆಗಳನ್ನು ನಿನ್ನ ಮನಸ್ಸಿನಿಂದ ಹೊರಮಾಡು. ಚಾಡಿ ಮಾತುಗಳನ್ನು ಕೇಳಿ ಏನೂ ಅರಿಯದ ನನ್ನನ್ನು ದುಃಖಕ್ಕೆ ಗುರಿಪಡಿಸುವುದು

ನಿನಗೆ ನ್ಯಾಯವಲ್ಲ. ಮುಗ್ಧೆ, ನಾನು ನಿನ್ನಲ್ಲಿ ಎಸಗಿರುವ ಅಪರಾಧ ವನ್ನು ನೀನು ನಿಜವೆಂದು ನಂಬುವುದಾದರೆ ಈಗ ನಿನಗೆ ಯಾವ ಶಿಕ್ಷೆ ಇಷ್ಟವಾಗುವುದೋ ಅದನ್ನು ವಿಧಿಸಿ ಸುಖಹೊಂದು.

೪೪

ಪ್ರೇಮಾಲಾಪ

**ಬಾಲೇ ನಾಥ ವಿಮುಂಚ ಮಾನಿನಿ ರುಷಂ ರೋಷಾನ್ಮಯಾ ಕಿಂ ಕೃತಂ**
**ಖೇದೋಽಸ್ಮಾಸು ನ ಮೇಽಪರಾಧ್ಯತಿ ಭವಾನ್ಸರ್ವೇಽಪರಾಧಾ ಮಯಿ ।**
**ತತ್ಕಿಂ ರೋದಿಷಿ ಗದ್ಗದೇನ ವಚಸಾ ಕಸ್ಯಾಗ್ರತೋ ರುದ್ಯತೇ**
**ನನ್ವೇತನ್ಮಮ ಕಾ ತವಾಸ್ಮಿ ದಯಿತಾ ನಾಸ್ಮೀತ್ಯತೋ ರುದ್ಯತೇ॥**

'ಬಾಲೇ–ಮುಗ್ಧೆ !' 'ನಾಥ-ಇನಿಯ' 'ಮಾನಿನಿ-ಅಭಿಮಾನದ ಕೂಸೇ, ರುಷಂ ಕೋಪವನ್ನು, ವಿಮುಂಚ ಬಿಡು.' 'ರೋಷಾತ್-ಕೋಪದಿಂದ, ಮಯಾ ನನ್ನಿಂದ, ಕಿಂಕೃತಂ-ಏನು ಮಾಡಲ್ಪಟ್ಟಿತು ?' 'ಅಸ್ಮಾಸು-ನಮ್ಮಲ್ಲಿ, ಖೇದಃ-ದುಃಖ(ವುಂಟಾಗಿದೆ.)' 'ಭವಾನ್-ನೀನು, ಮೇ-ನನಗೆ, ನ ಅಪರಾಧ್ಯತಿ-ಅಪರಾಧಮಾಡಲಿಲ್ಲ' 'ಸರ್ವೇ-ಎಲ್ಲ, ಅಪರಾಧಾಃ-ತಪ್ಪುಗಳು, ಮಯಿ ನನ್ನವು.' 'ತತ್-ಹಾಗಾದರೆ, ಗದ್ಗದೇನ-ಬಿಕ್ಕುತ್ತಿರುವ, ವಚಸಾ-ಮಾತಿನಿಂದ, ಕಿಂ-ಏತಕ್ಕಾಗಿ, ರೋದಿಷಿ-ಅಳುತ್ತಿರುವೆ?' 'ಕಸ್ಯ ಯಾರ, ಅಗ್ರತಃ-ಮುಂದೆ, ರುದ್ಯತೇ-ಅಳುತ್ತಿರುವೆನು?' 'ಏತತ್–ಈ, ಮನು-ನನ್ನ ಮುಂದೆ, ನನು (ರುದ್ಯತೇ)–ಅಳುತ್ತಿರುವೆಯಲ್ಲವೇ ?' 'ಅಸ್ಮಿ–ನಾನು, ತವ-ನಿನಗೆ, ಕಾ-ಯಾರು ?' 'ದಯಿತಾ-ಪ್ರಿಯತಮೆ' 'ನ ಅಸ್ಮಿ ನಾನು ಹಾಗಾಗಿಲ್ಲ. ಇತಿ-ಹೀಗೆಂದು, ಅತಃ-ಆ ಕಾರಣಕ್ಕಾಗಿಯೇ, ರುದ್ಯತೇ-ಅಳಲ್ಪಡುತ್ತದೆ.'

'ಬಾಲೇ' 'ಇನಿಯ' 'ಎಲೆ ಅಭಿಮಾನದ ಕೂಸೇ, ಕೋಪವನ್ನು ಬಿಡು' 'ಕೋಪಗೊಂಡು ನಾನೇನು ಮಾಡಿದೆ?' 'ನನ್ನಲ್ಲಿ ನಿನಗೆ ಖೇದವುಂಟಾಗಿದೆ.' 'ನೀನು ನನ್ನ ವಿಷಯದಲ್ಲಿ ಯಾವ ಅಪರಾಧವನ್ನು ಮಾಡಲಿಲ್ಲ; ಅಪರಾಧವೆಲ್ಲವೂ ನನ್ನದೇ.' 'ಹಾಗಾದರೆ

ಬಿಕ್ಕಿ ಬಿಕ್ಕಿ ಏಕೆ ಕಣ್ಣೀರಿಡುತ್ತಿರುವೆ?' 'ನಾನಾರ ಮುಂದೆ ಕಣ್ಣೀರಿಡುತ್ತಿರುವೆನು?' 'ಈ ನನ್ನ ಮುಂದೆ ಕಣ್ಣೀರಿಡುತ್ತಿರುವೆಯಲ್ಲ?' 'ನಾನು ನಿನಗೆ ಯಾರು?' 'ಪ್ರಿಯತಮೆ' 'ಅಯ್ಯೋ; ಹಾಗಾಗಲಿಲ್ಲವೆಂದೇ ಅಳುತ್ತಿರುವೆನು.'

೪೫

ಶಿಕ್ಷೆ

**ಅದ್ಯಾರಭ್ಯ ಯದಿ ಪ್ರಿಯೇ ಪುನರಹಂ ಮಾನಸ್ಯ ವಾऽನ್ಯಸ್ಯ ವಾ**
**ಗೃಹ್ಣೀಯಾಂ ಶಠದುರ್ನಯೇನ ಮನಸಾ ನಾಮಾಪಿ ಸಂಕ್ಷೇಪತಃ ।**
**ತತ್ತೇನೈವ ವಿನಾ ಶಶಾಂಕಧವಳಾಃ ಸ್ಪಷ್ಟಾಟ್ಟಹಾಸಾ ನಿಶಾ**
**ಏಕೋ ವಾ ದಿವಸಃ ಪಯೋದಮಲಿನೋ ಯಾಯಾನ್ಮಮ ಪ್ರಾವೃಷಿ ॥**

ಅದ್ಯ ಆರಭ್ಯ-ಇಂದು ಮೊದಲು, ಪ್ರಿಯೇ-ಇನಿಯನಲ್ಲಿ, ಅಹಂ-ನಾನು, ಪುನಃ-ಮತ್ತೆ, ಮಾನಸ್ಯ-ಕೋಪದ, ವಾ-ಅಥವಾ, ಅನ್ಯಸ್ಯ-ಬೇರೊಂದು ಭಾವನೆಯ, ನಾಮಾಪಿ-ಹೆಸರನ್ನಾದರೂ ಶಠದುರ್ನಯೇನ-ಅತ್ಯಂತ ಒರಟಾದ, ಮನಸಾ-ಮನಸ್ಸಿನಿಂದ, ಸಂಕ್ಷೇಪತಃ-ಸ್ವಲ್ಪವಾಗಿಯೂ, ಯದಿ ಗೃಹ್ಣೀಯಾಂ-ಅನುಸರಿಸಿ ಹೇಳಿದ್ದೇ ಆದರೆ, ತತ್-ಆಗ, ತೇನ ವಿನಾ ಏವ-ಆ ಪ್ರಿಯತಮನಿಲ್ಲದೆ, ಶಶಾಂಕ ಧವಳಾಃ-ಚಂದ್ರಿಕೆಯಿಂದ ಪ್ರಕಾಶಿಸುವ, ಸ್ಪಷ್ಟಾಟ್ಟಹಾಸಾಃ-ಹೆಚ್ಚಾದ ಸೌಂದರ್ಯದಿಂದ ಮೆರೆಯುವ, ನಿಶಾಃ-ಅನೇಕ ರಾತ್ರಿಗಳೂ, ಪ್ರಾವೃಷಿ-ವರ್ಷಋತುವಿನಲ್ಲಿ, ಪಯೋದಮಲಿನಃ-ಮೇಘದಿಂದ ಕೂಡಿ ಸೂರ್ಯರಶ್ಮಿಯಿಲ್ಲದ, ಏಕಃ-ಒಂದು, ದಿವಸಃ ವಾ-ದಿವಸವಾದರೂ, ಯಾಯಾತ್-ಕಳೆಯಬೇಕು

ಇಂದು ಮೊದಲು ನಾನು ನನ್ನ ಪ್ರಿಯತಮನ ವಿಷಯದಲ್ಲಿ ಕೋಪವನ್ನಾಗಲೀ ಇಲ್ಲವೆ ಬೇರೊಂದು ಅಪ್ರಿಯವಾದ ಭಾವವನ್ನಾಗಲೀ ಒರಟು ಮನಸ್ಸಿನಿಂದ ಸ್ವಲ್ಪಮಟ್ಟಿಗಾದರೂ ತೋರ್ಪಡಿಸಿದ ಪಕ್ಷ

ದಲ್ಲಿ ಆ ನನ್ನ ಪ್ರಿಯತಮನಿಲ್ಲದೆ ಬೆಳುದಿಂಗಳಿಂದ ಸುಂದರವಾಗಿ ಮೆರೆಯುವ ರಾತ್ರಿಗಳನ್ನೂ ಇಲ್ಲವೆ ವರ್ಷಋತುವಿನಲ್ಲಿ ಮೋಡಕವಿದು ಸೂರ್ಯ ರಶ್ಮಿಯಿಲ್ಲದ ಒಂದು ದಿನವನ್ನಾದರೂ ಕಳೆಯುವೆನು.

**೪೬–೪೭**

ಇಂಗಿತದಿಂದ ಅರಿವು

**ಅನಲ್ಪಚಿಂತಾಭರಮೋಹನಿಶ್ಚಲಾ ವಿಲೋಕ್ಯಮಾನೈವ ಕರೋತಿ ಸಾಧ್ವಸಂ**
**ಸ್ವಭಾವಶೋಭಾನತಿಮಾತ್ರಭೂಷಣಾ ತನುಸ್ತವೇಯಂ ಬತ ಕಿಂ ನು ಸುಂದರಿ ||**

**ಇತಿ ಪ್ರಿಯೇ ಪೃಚ್ಛತಿ ಮಾನವಿಹ್ವಲಾ**
**ಕಥಂಚಿದಂತರ್ಧೃತ ಬಾಷ್ಪಗದ್ಗದಂ**
**ನ ಕಿಂಚಿದಿತ್ಯೇವ ಜಗಾದ ಯದ್ವಧೂಃ**
**ಕಿಯನ್ನ ತೇನೈವ ತಯಾಸ್ಯ ವರ್ಣಿತಂ ||**

ಸುಂದರಿ-ಎಲೌ ಸುಂದರಿಯೇ, ಅನಲ್ಪ-ಬಹಳವಾದ, ಚಿಂತಾಭರ-ಯೋಚನೆಯ ಭಾರದ, ಮೋಹ-ಅಜ್ಞಾನದಿಂದ, ನಿಶ್ಚಲಾ-ಒಂದೇ ಕಡೆ ಇರುವ, ಸ್ವಭಾವ-ಸ್ವಾಭಾವಿಕವಾದ, ಶೋಭಾ ಸೌಂದರ್ಯದಿಂದ, ಅನತಿಮಾತ್ರ-ಮುಂದಿನ ಶರೀರದ ಬಾಗಿರುವಿಕೆಯಿಂದ ಮಾತ್ರ, ಭೂಷಣಾ-ಅಲಂಕೃತವಾಗಿರುವ, ತವ-ನಿನ್ನ, ಇಯಂ-ಈ, ತನುಃ-ಶರೀರವು, ವಿಲೋಕ್ಯ ಮಾನೈವ-ಕೇವಲ ನೋಡುವುದರಿಂದಲೇ, ಸಾಧ್ವಸಂ-ಭಯವನ್ನು, ಕರೋತಿ ಬತ-ಉಂಟುಮಾಡುತ್ತದೆ, ಕಿಂ-ಅಲ್ಲವೆ ?

ಇತಿ-ಹೀಗೆ, ಪ್ರಿಯೇ-ಇನಿಯನು, ಪೃಚ್ಛತಿ (ಸತಿ)-ಪ್ರಶ್ನೆಮಾಡಲಾಗಿ, ಮಾನವಿಹ್ವಲಾ-ಕೋಪದಿಂದ ಕಲಕಿದ ಮನಸ್ಸುಳ್ಳ, ವಧೂಃ-ಯುವತಿಯು, ಅಂತಃ-ಮನಸ್ಸಿನಲ್ಲಿಯೇ, ಧೃತ-ಧರಿಸಿದ, ಬಾಷ್ಪ-ಕಣ್ಣೀರಿನಿಂದ, ಗದ್ಗದಂ-ಕುಗ್ಗಿದ-ಧ್ವನಿಯುಳ್ಳ ರೀತಿಯಲ್ಲಿ, ಕಥಂಚಿತ್-ಬಹು ಕಷ್ಟಪಟ್ಟು, ನ ಕಿಂಚಿದ್-ಏನೂ ಇಲ್ಲ, ಇತ್ಯೇವ-ಇಷ್ಟರಿಂದಲೇ, ಯತ್-ಯಾವ ಮಾತನ್ನು ಜಗಾದ-ಹೇಳಿದಳೋ, ತೇನೈವ-ಅಷ್ಟ

ರಿಂದಲೇ, ತಯಾ-ಅವಳಿಂದ, ಅಸ್ಯ-ಇವನಿಗೆ (ಇನಿಯನಿಗೆ) ಕಿಯತ್-ಯಾವುದು ತಾನೆ, ನ ವರ್ಣಿತಂ-ವಿವರಿಸಲ್ಪಡಲಿಲ್ಲ?

'ಎಲೈ ಚೆಲುವೆ, ಬಹಳ ಚಿಂತೆಯ ಭಾರದಿಂದ ನೀನು ವಿಹ್ವಲಗೊಂಡಂತಿರುವೆ. ಸ್ವಭಾವ ಸೌಂದರ್ಯದಿಂದ ಅಲಂಕೃತವಾದ ನಿನ್ನ ಶರೀರ ಸ್ವಲ್ಪ ಮುಂದಕ್ಕೆ ಬಾಗಿರುವುದನ್ನು ನೋಡುವುದರಿಂದ ಭಯವನ್ನುಂಟುಮಾಡುತ್ತದೆ.' ಹೀಗೆಂದು ಪ್ರಿಯನು ನುಡಿಯಲು. ಒತ್ತಿದ ಕಣ್ಣೀರಿನಿಂದ, ಕುಗ್ಗಿದ ಧ್ವನಿಯಿಂದ ಕೂಡಿದ ಅವನ ಪ್ರಿಯತಮೆ ತುಂಬ ಕಷ್ಟಪಟ್ಟು 'ಏನೂ ಇಲ್ಲವಲ್ಲ' ಎಂದು ಇಷ್ಟು ಮಾತ್ರ ನುಡಿದಳು. ಆ ನುಡಿಯಿಂದ ಅವಳ ಇಂಗಿತ ಇನಿಯನಿಗೆ ಏನು ತಾನೆ ವರ್ಣಿತವಾಗಲಿಲ್ಲ?

೪೮

ವಿರಹವ್ಯಥೆ

**ಅಂಗಾನಾಮತಿತಾನವಂ ಕುತ ಇದಂ ಕಸ್ಮಾದಕಸ್ಮಾದಿದಂ**
**ಮುಗ್ಧೇ ಪಾಂಡುಕಪೋಲಮಾನನಮಿತಿ ಪ್ರಾಣೇಶ್ವರೇ ಪೃಚ್ಛತಿ।**
**ತನ್ವ್ಯಾ ಸರ್ವಮಿದಂ ಸ್ವಭಾವತ ಇತಿ ವ್ಯಾಹೃತ್ಯ ಪಕ್ಷ್ಮಾಂತರ**
**ವ್ಯಾಪೀ ಬಾಷ್ಪಭರಸ್ತಯಾ ವಲಿತಯಾ ನಿಃಶ್ವಸ್ಯ ಮುಕ್ತೋಽ**
**ನ್ಯತಃ ॥**

ಮುಗ್ಧೇ-ಏನೂ ಅರಿಯದ ಮುಗ್ಧಳೇ, ಇದಂ-ಈ, ಅಂಗಾನಾಂ-ಅವಯವಗಳ, ಅತಿತಾನವಂ-ಹೆಚ್ಚಾದ ಕೃಶಸ್ವಭಾವವು, ಕುತಃ-ಏತಕ್ಕಾಗಿ ಆಯಿತು? ಅಕಸ್ಮಾತ್-ಕಾರಣವೇ ಇಲ್ಲದೆ, ಇದಂ-ಈ, ಆನನಂ-ಮುಖ, ಪಾಂಡುಕಪೋಲಂ-ಬಿಳುಪಾದ ಕೆನ್ನೆಯುಳ್ಳದ್ದಾಗಿ, ಕಸ್ಮಾತ್-ಯಾರ ದೆಸೆಯಿಂದಾಯಿತು? ಇತಿ-ಹೀಗೆ, ಪ್ರಾಣೇಶ್ವರೇ-ಪ್ರಾಣಪ್ರಿಯನು, ಪೃಚ್ಛತಿ (ಸತಿ) ಪ್ರಶ್ನೆಮಾಡಲಾಗಿ, ತನ್ವ್ಯಾಃ-ಕೃಶಾಂಗಿಯಾದ (ನನ್ನ) ಪ್ರಿಯೆಯು, ಇದಂ ಸರ್ವಂ-ಈ ವಿಕಾರವೆಲ್ಲವೂ, ಸ್ವಭಾವತಃ-ಸಹಜವಾದದ್ದು, ಇತಿ-ಹೀಗೆ, ವ್ಯಾಹೃತ್ಯ-ಹೇಳಿ, ಪಕ್ಷ್ಮಾಂತರವ್ಯಾಪೀ-ರೆಪ್ಪೆಗಳ ಮಧ್ಯದಲ್ಲಿ ಅಡಗಿರುವ, ಬಾಷ್ಪಭರಃ-ಕಣ್ಣೀರಿನ ಪ್ರವಾಹವು, ವಲಿತಯಾ-ಬೇರೆ ಕಡೆಗೆ ತಿರುಗಿದ, ತಯಾ-ಅವಳಿಂದ, ನಿಃಶ್ವಸ್ಯ-ನಿಟ್ಟುಸಿರಿಟ್ಟು, ಅನ್ಯತಃ-ಬೇರೆ ಕಡೆಗೆ, ಮುಕ್ತಃ-ಬಿಡಲ್ಪಟ್ಟಿತು.

'ಎಲೆ ಮುಗ್ಧೆ, ನಿನ್ನ ಅವಯುವಗಳು ಏಕೆ ಬಹುವಾಗಿ ಕೃಶವಾಗಿವೆ? ಯಾವ ಕಾರಣದಿಂದ ಈ ನಿನ್ನ ಮುಖ ಕಳೆಗುಂದಿ, ಕೆನ್ನೆ ಬಿಳುಪೇರಿತು?' ಹೀಗೆಂದು ಪ್ರಿಯತಮನು ಪ್ರಶ್ನೆ ಮಾಡಲು ಅವನ ನಲ್ಲೆ ದಾಕ್ಷಿಣ್ಯದಿಂದ 'ಕೃಶಾಂಗಿಯರಿಗೆ ಇದೆಲ್ಲ ಸಹಜವಾದದ್ದು' ಎಂದು ನುಡಿದು, ರೆಪ್ಪೆಗಳ ನಡುವೆ ತಡೆದಿಟ್ಟಿದ್ದ ಕಣ್ಣೀರಿನ ಪ್ರವಾಹವನ್ನು ಹರಿಯಿಸಿ, ಬೇರೆ ಕಡೆ ತಿರುಗಿ ನಿಟ್ಟುಸಿರುಬಿಟ್ಟಳು.

೩೯

ನಿನ್ನ ನಿಗೂಢವಾದ ಕೋಪ ನನ್ನನ್ನು ದಹಿಸುತ್ತಿದೆ

**ಕೃತೋ ದೂರಾದೇವ ಸ್ಮಿತಮಧುರಮಭ್ಯುದ್ಗಮವಿಧಿಃ**
**ಶಿರಸ್ಯಾಜ್ಞಾ ನ್ಯಸ್ತಾ ಪ್ರತಿವಚನವತ್ಯಾನತಿಮತಿ**
**ನ ದೃಷ್ಟೇಃ ಶೈಥಿಲ್ಯಂ ಮಿಲನ ಇತಿ ಚೇತೋ ದಹತಿ ಮೇ**
**ನಿಗೂಢಾಂತಃಕೋಪಾ ಕಠಿನಹೃದಯೇ ಸಂವೃತಿರಿಯಂ ||**

ದೂರಾದೇವ–ಬಹಳ ದೂರದಿಂದಲೇ, ಸ್ಮಿತಮಧುರಂ–ಹಿತವಾದ ಮುಗುಳ್ನಗೆಯಿಂದ, ಅಭ್ಯುದ್ಗಮವಿಧಿಃ–ಗುರು ಆಚಾರ್ಯ ಮುಂತಾದವರಿಗೆ ತೋರ್ಪಡಿಸುವ ಮರ್ಯಾದೆಯು. ಕೃತಃ–ಮಾಡಲ್ಪಟ್ಟಿತು. ಪ್ರತಿವಚನವತೀ–ಪ್ರತ್ಯುತ್ತರ ಕೊಡಲೇಬೇಕಾಗಿದ್ದ, ಆಜ್ಞಾ ನನ್ನ ಅಪ್ಪಣೆ, ಆನತಿಮತಿ–ನಮಸ್ಕಾರ ಮಾಡುವ ಭಂಗಿಯಲ್ಲಿ ಬಾಗಿಸಿದ, ಶಿರಸಿ–ತಲೆಯಲ್ಲಿ, ನ್ಯಸ್ತಾ–ಧರಿಸಲ್ಪಟ್ಟಿತು. ದೃಷ್ಟೇಃ (ನನ್ನ) ನೋಟದ. ಮಿಲನೇ–(ನಿನ್ನ) ದೃಷ್ಟಿಯನ್ನು ಸೇರಿಸುವ ಕಾರ್ಯದಲ್ಲಿ, ಶೈಥಿಲ್ಯಂ–ನಿಧಾನವಾಗಿರುವಿಕೆ, ನ–ಇರಲಿಲ್ಲ. ಇತಿ–ಇಂತಹ ಸೂಚನೆಗಳಲ್ಲಿ, ಹೇ ಕಠಿನ ಹೃದಯೇ–ಎಲೌ ಕಠಿನ ಮನಸ್ಸುಳ್ಳವಳೇ, ನಿಗೂಢಾಂತಃ ಕೋಪಾ–ಅಡಗಿಸದ ಮನಸ್ಸಿನ ಕೋಪವುಳ್ಳ, ಇಯಂ–ಈ, ಸಂವೃತಿಃ–ಆಕಾರಗೋಪನವು, ಮೇ–ನನ್ನ, ಚೇತಃ–ಮನಸ್ಸನ್ನು ದಹತಿ–ಸುಡುತ್ತಿದೆ.

ಎಲೆ ಕಠಿಣಹೃದಯಳೇ, ನನ್ನನ್ನು ದೂರದಲ್ಲಿ ಕಾಣುತ್ತಲೇ ಗುರುಜನರಿಗೆ ತೋರಿಸುವ ವಿಶೇಷವಾದ ಮರ್ಯಾದೆಯನ್ನು ಹಿತವಾದ ಮುಗುಳುನಗೆ ಬೀರುತ್ತ ನನ್ನಲ್ಲಿ ನೀನು ವ್ಯಕ್ತಪಡಿಸಿದೆ. ಮರುಮಾತ

ನಾಡದೆ, ನಮಸ್ಕರಿಸುವ ಭಂಗಿಯಲ್ಲಿ ನನ್ನ ಅಪ್ಪಣೆಯನ್ನು ತಲೆಯಲ್ಲಿ ಹೊತ್ತೆ ನನ್ನ ಪ್ರೀತಿಯು ಕುಡಿ ನೋಟದೊಡನೆ ನಿನ್ನ ಪ್ರೀತಿಯ ಪಡಿನೋಟವನ್ನು ಬೆರೆಸುವ ಕಾರ್ಯದಲ್ಲಿ ನೀನು ಶೈಥಿಲ್ಯವನ್ನು ತೋರ ಲಿಲ್ಲ. ಈ ತೆರನಾದ ಸೂಚನೆಗಳನ್ನು ತೋರುತ್ತಿರುವ ನಿನ್ನ ಈ ಕೋಪದ ಆಕಾರ ನನ್ನ ಮನಸ್ಸನ್ನು ದಹಿಸುತ್ತಿದೆ.

೫೦

ವಿರಹವ್ಯಥೆಯನ್ನು ಸಹಿಸುವುದು ಅಸಾಧ್ಯ

**ವಿರಹವಿಷಮಃ ಕಾಮೋ ವಾಮಸ್ತನೂಕುರುತೇ ತನುಂ**
**ದಿವಸಗಣನಾದಕ್ಷಶ್ಚಾಯಂ ವ್ಯಪೇತಘೃಣೋ ಯಮಃ**
**ತ್ವಮಪಿ ವಶಗೋ ಮಾನವ್ಯಾಧೇರ್ವಿಚಿಂತಯ ನಾಥ ಹೇ**
**ಕಿಸಲಯಮೃದುರ್ಜೀವೇದೇವಂ ಕಥಂ ಪ್ರಮದಾಜನಃ**

ಹೇನಾಥ-ಎಲೈ ಸ್ವಾಮಿಯೆ, ಕಾಮ-ಮನ್ಮಥನು, ವಿರಹವಿಷಮಃ-ವಿರಹಾವಸ್ಥೆಯಲ್ಲಿ ಬಹಳ ಕ್ರೂರವಾಗಿ, ವಾಮಃ-(ನಿಮಗೆ) ಪ್ರತಿಕೂಲ ವಾಗಿ, ತನುಂ-ಶರೀರವನ್ನು, ತನೂಕುರುತೇ-ಕ್ಷೀಣವನ್ನಾಗಿ ಮಾಡು ತ್ತಾನೆ. ಅಯಂ-ಈ, ವ್ಯಪೇತ-ಹೊರಟು ಹೋದ, ಘೃಣಃ-ಕರುಣೆಯುಳ್ಳ, ಯಮಸ್ಯ-ಯಮನಾದರೋ, ದಿವಸಗಣನಾದಕ್ಷಃ-ದಿವಸಗಳನ್ನು ಎಣಿಸು ವುದರಲ್ಲಿ ಸಮರ್ಥನು. ತ್ವಮಪಿ-ನೀನಾದರೋ, ಮಾನವ್ಯಾಧೇಃ-ಪ್ರಣಯಕೋಪವೆಂಬ ರೋಗಕ್ಕೆ, ವಶಗಃ-ಅಧೀನವಾಗಿರುವೆ. ವಿಚಿಂ ತಯ-ಯೋಚನೆಮಾಡು. ಕಿಸಲಯ ಮೃದುಃ-ಚಿಗುರಿನಂತೆ ಮೃದು ಸ್ವಭಾವವುಳ್ಳ, ಪ್ರಮದಾಜನಃ-ಸ್ತ್ರೀ ಜನವು, ಏವಂ-ಈ ರೀತಿಯಲ್ಲಿ, ಕಥಂ-ಹೇಗೆ ತಾನೆ, ಜೀವೇತ್-ಜೀವಿಸುವುದು ?

ಎಲೈ ಸ್ವಾಮಿಯೇ, ವಿರಹಾವಸ್ಥೆಯಲ್ಲಿ ಮನ್ಮಥನು ಪ್ರಣಯಿಗಳ ವಿಷಯದಲ್ಲಿ ಕ್ರೂರನಾಗಿ ವರ್ತಿಸಿ ದೇಹವನ್ನು ಕೃಶಮಾಡುತ್ತಾನೆ. ಯಮನಾದರೋ ಕರುಣೆಯಿಲ್ಲದವನು; ದಿವಸಗಳನ್ನು ಎಣಿಸುವುದರಲ್ಲಿ ಅವನು ದಕ್ಷ. ನೀನಾದರೋ ಪ್ರಣಯಕೋಪವೆಂಬ ವ್ಯಾಧಿಗೆ ತುತ್ತಾಗಿ ರುವೆ. ಸ್ವಲ್ಪ ಯೋಚನೆಮಾಡು. ಚಿಗುರಿನಂತೆ ಕೋಮಲವಾದ ಈ ಪ್ರಮದೆಯರು ವಿರಹವ್ಯಥೆಯನ್ನು ಸಹಿಸಿಕೊಂಡು ಹೇಗೆ ತಾನೆ ಜೀವಿ ಸುವುದು ?

೫೧

ಮಾನಿನಿಯ ಕೋಪಪ್ರದರ್ಶನವೂ ರಮ್ಯವಾದುದು

**ಆಶಂಕ್ಯ ಪ್ರಣತಿಂ ಪಟಾಂತಪಿಹಿತೌ ಪಾದೌ ಕರೋತ್ಯಾದರಾತ್**
**ವ್ಯಾಜೇನಾಗತಮಾವೃಣೋತಿ ಹಸಿತಂ ನ ಸ್ಪಷ್ಟಮುದ್ವೀಕ್ಷತೇ ।**
**ಮಯ್ಯಾಲಾಪವತಿ ಪ್ರತೀಪವಚನಂ ಸಖ್ಯಾ ಸಹಾಭಾಷತೇ**
**ತಸ್ಯಾಸ್ತಿಷ್ಠತು ನಿರ್ಭರಪ್ರಣಯಿತಾ ಮಾನೋಽಪಿ ರಮ್ಯೋ-**
**ದಯಃ ॥**

ಪ್ರಣತಿಂ-(ಪ್ರಿಯನು ಮಾಡುವ) ನಮುಸ್ಕಾರವನ್ನು, ಆಶಂಕ್ಯ-ಊಹಿಸಿ, ಪಾದೌ-ತನ್ನ ಕಾಲುಗಳನ್ನು, ಪಟಾಂತಪಿಹಿತೌ-ಬಟ್ಟೆಗಳಿಂದ ಮುಚ್ಚಿದ್ದನ್ನಾಗಿ, ಆದರಾತ್ ಪ್ರೀತಿಯಿಂದಲೇ, ಕರೋತಿ-ಮಾಡುತ್ತಾಳೆ. ವ್ಯಾಜೇನ-ಕಾರಣಾಂತರದಿಂದ, ಆಗತಂ ಬಂದ, ಹಸಿತಂ-ಮುಗುಳುನಗೆಯನ್ನು, ಆವೃಣೋತಿ-ತಡೆಯುತ್ತಾಳೆ. ಸ್ಪಷ್ಟಂ-ವ್ಯಕ್ತವಾಗಿ, ನ ಉದ್ವೀಕ್ಷತೇ-(ನನ್ನನ್ನು) ನೋಡುವುದಿಲ್ಲ. ಮಯಿ-ನಾನು, ಆಲಾಪವತಿ (ಸತಿ)-ಮಾತನಾಡಿಸಲಾಗಿ, ಪ್ರತೀಪವಚನಂ-ವಿರುದ್ಧವಾದ ಮಾತನ್ನು, ಸಖ್ಯಾ ಸಹ-ಗೆಳತಿಯೊಡನೆ, ಆಭಾಷತೇ-ಮಾತನಾಡುತ್ತಾಳೆ. ತಸ್ಯಾಃ-ಆ ಸುಂದರಿಯ, ನಿರ್ಭರ-ಅತಿಶಯವಾದ, ಪ್ರಣಯಿತಾ ಪ್ರೇಮಪ್ರದರ್ಶನವು, ತಿಷ್ಠತು-ಇರಲಿ; ಮಾನಃ ಅಪಿ-ಅವಳ ಕೋಪವೂ ಕೂಡ, ರಮ್ಯೋದಯಃ-ಸುಂದರವಾದ ಆವಿರ್ಭಾವವುಳ್ಳದು.

ಪ್ರಿಯನು ನಮುಸ್ಕಾರ ಮಾಡುವನೆಂದು ಊಹಿಸಿ, ನನ್ನ ಪ್ರಿಯತಮೆ ತನ್ನೆರಡು ಕಾಲುಗಳನ್ನು, ಪ್ರೀತಿಯನ್ನು ವ್ಯಕ್ತಪಡಿಸುತ್ತಲೇ ಸೀರೆಯಿಂದ ಮುಚ್ಚಿಕೊಳ್ಳುವಳು. ಕಾರಣಾಂತರದಿಂದ ಬಂದ ಮುಗುಳುನಗೆಯನ್ನು ಆಕೆ ತಡೆದುಕೊಳ್ಳುತ್ತಾಳೆ. ನೇರವಾಗಿ ನನ್ನ ಪ್ರಿಯೆ ನನ್ನನ್ನು ನೋಡುವುದಿಲ್ಲ. ನಾನು ಅವಳನ್ನು ನುಡಿಸಿದರೂ ಅದಕ್ಕೆ ಪ್ರತಿಯಾದ ಮಾತನ್ನು ತನ್ನ ಸಖಿಯರೊಡನೆ ನುಡಿಯುತ್ತಾಳೆ. ಆ ಚಲುವೆಯ ಅತಿಯಾದ ಪ್ರೇಮಪ್ರದರ್ಶನದ ಮಾತು ಹಾಗಿರಲಿ; ಅವಳ ಕೋಪವೂ ಕೂಡ ಅತಿ ರಮ್ಯವಾದುದು.

೫೨

ಮುಗ್ಧತೆಯೇ ಒಂದು ತೊಡವು

**ಯಾವಂತ್ಯೇವ ಪದಾನ್ಯಲೀಕವಚನೈರಾಲೀಜನೈಃ ಪಾಠಿತಾ**
**ತಾವಂತ್ಯೇವ ಕೃತಾಗಸೋ ದ್ರುತತರಂ ಸಂಲಪ್ಯ ಪತ್ಯುಃ ಪುರಃ।**
**ಪ್ರಾರೇಭೇ ಪರತೋ ಯಥಾ ಮನಸಿಜಸ್ಯೇಚ್ಛಾ ತಥಾ ವರ್ತಿತುಂ**
**ಪ್ರೇಮ್ಣೋ ಮೌಗ್ಧ್ಯವಿಭೂಷಣಸ್ಯ ಸಹಜಃ ಕೋಽಪ್ಯೇಷ ಕಾಂತಃ ಕ್ರಮಃ ॥**

ಮುಗ್ಧೆಯು, ಅಲೀಕವಚನೈಃ-ಸುಳ್ಳು ಮಾತುಗಳಿಂದ, ಯಾವಂತಿ ಏವ-ಎಷ್ಟು ರೀತಿಯ, ಪದಾನಿ-ಕೋಪದ ಮಾತುಗಳು, ಆಲೀಜನೈಃ-ಗೆಳತಿಯರಿಂದ, ಪಾಠಿತಾ-ಕಲಿಸಲ್ಪಟ್ಟಳೋ, ತಾವಂತಿ ಏವ ಅಷ್ಟೇ ಮಾತುಗಳನ್ನೇ, ಕೃತಾಗಸಃ ತಪ್ಪು ಮಾಡಿದ, ಪತ್ಯುಃ-ಪ್ರಿಯನ, ಪುರಃ-ಮುಂದುಗಡೆ, ದ್ರುತತರಂ-ಬೇಗ ಬೇಗ, ಸಂಲಪ್ಯ-ಹೇಳಿ, ಪರತಃ-ಆ ಮಾತುಗಳು ಮುಗಿದ ಮೇಲೆ, ಯಥಾ-ಹೇಗೆ, ಮನಸಿಜಸ್ಯ-ಮನ್ಮಥನ, ಇಚ್ಛಾ-ಅಪೇಕ್ಷೆಯೋ, ತಥಾ-ಹಾಗೆಯೇ, ವರ್ತಿತುಂ-ನಡೆಯುವುದಕ್ಕೆ, ಪ್ರಾರೇಭೆ-ಆರಂಭಿಸಿದಳು. ಮೌಗ್ಧ್ಯವಿಭೂಷಣಸ್ಯ-ಏನೂ ಅರಿಯದ ಭಾವನೆಯಿಂದ ಕೂಡಿದ (ಮುಗ್ಧತೆಯನ್ನೇ ಒಂದು ತೊಡವಾಗಿ ಉಳ್ಳ) ಪ್ರೇಮ್ಣಃ-ಪ್ರೀತಿಯ, ಸಹಜಃ-ಕೃತ್ರಿಮವಿಲ್ಲದ, ಏಷಃ-ಈ, ಕ್ರಮಃ-ಒಂದು ವಿಧವು, ಕೋಽಪಿ-ಹೇಳಲಾಗದ, ಕಾಂತಃ-ಸೌಂದರ್ಯವುಳ್ಳದಲ್ಲವೆ !

ಗೆಳತಿಯರು ಕಲಿಸಿಕೊಟ್ಟ ನಟನೆಯ ಮಾತುಗಳನ್ನು ಕಂಠಪಾಠ ಮಾಡಿಕೊಂಡ ಮುಗ್ಧೆ, ತನ್ನ ವಿಷಯದಲ್ಲಿ ಅಪರಾಧ ಮಾಡಿದ ಪ್ರಿಯನ ಮುಂದೆ ಅವುಗಳನ್ನು ಬೇಗ ಬೇಗ ಒಪ್ಪಿಸಿಬಿಟ್ಟಳು. ಆ ಬಳಿಕ ಆಕೆ ಮನ್ಮಥನ ಇಷ್ಟದಂತೆ ನಡೆಯಲು ತೊಡಗಿದಳು. ಮುಗ್ಧತೆಯನ್ನೇ ತೊಡವಾಗಿ ಉಳ್ಳ ಪ್ರೇಮದ ಅಕೃತ್ರಿಮವಾದ ಕ್ರಮವೂ ಸುಂದರವಾದುದಲ್ಲವೇ ?

೫೩

## ಅನುಗ್ರಹ

**ಪರಿಮ್ಲಾನೇ ಮಾನೇ ಮುಖಶಶಿನಿ ತಸ್ಯಾಃ ಕರಧೃತೇ**
**ಮಯಿ ಕ್ಷೀಣೋಪಾಯೇ ಪ್ರಣಿಪತನ ಮಾತ್ರೈಕ ಶರಣೇ ।**
**ತಯಾ ಪಕ್ಷ್ಮಪ್ರಾಂತಧ್ವಜಪುಟ ನಿರುದ್ಧೇನ ಸಹಸಾ**
**ಪ್ರಸಾದೋ ಬಾಷ್ಪೇಣ ಸ್ತನತಟವಿಶೀರ್ಣೇನ ಕಥಿತಃ ॥**

ತಸ್ಯಾಃ-ಆ ಹೆಂಗುಸಿನ, ಮಾನೇ-ಕೋಪವು, ಪರಿಮ್ಲಾನೇ-ಶಿಥಿಲವಾಗಲು, ಮುಖಶಶಿನಿ-ಚಂದ್ರನಂತಿರುವ ಆಕೆಯ ಮುಖವು, ಕರಧೃತೇ-ಆಕೆಯ ಕೈಮೇಲೆ ನಿಲ್ಲಲು, ಕ್ಷೀಣೋಪಾಯೇ-ಕಳೆದು ಹೋದ ನಾನಾ ಉಪಾಯಗಳುಳ್ಳ, ಮಯಿ-ನಾನು, ಪ್ರಣಿಪತನಮಾತ್ರೈಕಶರಣೇ-ಕೇವಲ ನಮಸ್ಕಾರದಿಂದಲೇ ಶರಣು ಹೊಂದುತ್ತಿರಲು, ಸಹಸಾ-ಕೂಡಲೇ, ತಯಾ-ಆ ನನ್ನ ಪ್ರಿಯೆಯಿಂದ, ಪಕ್ಷ್ಮ-ರೆಪ್ಪೆಗಳ, ಪ್ರಾಂತ-ಕೊನೆಯ ಭಾಗವೆಂಬ, ಧ್ವಜ-ಬಾವುಟದ, ಪುಟ-ಅಂಚಿನಿಂದ, ನಿರುದ್ಧೇನ-ತಡೆಯಲ್ಪಟ್ಟ, ಸ್ತನ-ಕಠಿನ ಕುಚಗಳ, ತಟ-ಅಗ್ರಭಾಗದಲ್ಲಿ, ವಿಶೀರ್ಣೇನ-ಹನಿಹನಿಯಾಗಿ ಒಡೆಯುವ, ಬಾಷ್ಪೇಣ-ಕಣ್ಣೀರಿನಿಂದ, ಪ್ರಸಾದಃ-ಅನುಗ್ರಹರೂಪವಾದ ಕಾರ್ಯವು, ಕಥಿತಃ-ಹೇಳಲ್ಪಟ್ಟಿತು.

ನನ್ನ ಪ್ರಿಯತಮೆಯ ಕೋಪ ಸಡಿಲವಾಗಿ, ಚಂದ್ರನಂತೆ ದುಂಡಾದ ಮುಖವನ್ನು ಆಕೆ ತನ್ನ ಕೈಯಲ್ಲಿಟ್ಟುಕೊಂಡಳು. ಆಕೆಯನ್ನು ಒಲಿಸಿಕೊಳ್ಳಲು ನಾನು ಬೇರೆ ಉಪಾಯಕಾಣದೆ ನನ್ನ ಪ್ರಿಯತಮೆಗೆ ನಮಸ್ಕರಿಸಿದೆನು. ಕೂಡಲೇ ಆ ನನ್ನ ಪ್ರಿಯತಮೆ ತಡೆದಿಟ್ಟಿದ್ದ ಕಣ್ಣೀರನ್ನು ತನ್ನ ಸ್ತನಗಳ ಅಗ್ರಭಾಗದಲ್ಲಿ ಹನಿ ಹನಿಯಾಗಿ ಸುರಿಸಿ ಆ ಮೂಲಕ ನನ್ನನ್ನು ಅನುಗ್ರಹಿಸಿದಳು.

೫೪

## ಪರಸ್ಪರ ಪ್ರಸಾದನ

**ಪಶ್ಯೇಯಂ ಮಯಿ ಕಿಂ ಪ್ರಪದ್ಯತ ಇತಿ ಸ್ಥೈರ್ಯಂ ಮಯಾ**
**ಲಂಬಿತಂ**

**ಕಿಂ ಮಾಂ ನಾಲಪತೀತ್ಯಯಂ ಖಲು ಶಠಃ ಕೋಪಸ್ತಯಾ**
**ಪ್ಯಾಶ್ರಿತಃ**
**ಇತ್ಯನ್ಯೋನ್ಯವಿಲಕ್ಷದೃಷ್ಟಿಚತುರೇ ತಸ್ಮಿನ್ನವಸ್ಥಾಂತರೇ**
**ಸವ್ಯಾಜಂ ಹಸಿತಂ ಮಯಾ ಧೃತಿಹರೋ ಬಾಷ್ಪಸ್ತು**
**ಮುಕ್ತಸ್ತಯಾ ॥**

(ಇಯಂ-ಈಕೆ) ಮಯಿ-ನನ್ನಲ್ಲಿ, ಕಿಂ-ಯಾವ ಭಾವನೆಯನ್ನು, ಪ್ರಪದ್ಯತೇ-ಹೊಂದುವಳು, ಪಶ್ಯೇಯಂ-ನೋಡೋಣ, ಇತಿ-ಹೀಗೆ ತಿಳಿದು. ಮಯಾ-ನನ್ನಿಂದ, ಸ್ಥೈರ್ಯಂ-ಸ್ಥಿರಭಾವವು, ಆಲಂಬಿತಂ-ಆಶ್ರಯಿಸಲ್ಪಟ್ಟಿತು. ಅಯಂ-ಈ, ಶಠಃ ಖಲು-ಒರಟನಾದ ಪ್ರಿಯನಾದವರೋ, ಮಾಂ-ನನ್ನನ್ನು ಕುರಿತು, ಕಿಂ ಏತಕ್ಕಾಗಿ, ನಾಲಪತಿ-ಮಾತನಾಡುವುದಿಲ್ಲ. ಇತಿ-ಹೀಗೆ. ತಯಾ ಅಪಿ-ಅವಳಿಂದಲೂ, ಕೋಪಃ-ಕೋಪವು, ಆಶ್ರಿತಃ-ಆಶ್ರಯಿಸಲ್ಪಟ್ಟಿತು. ಇತಿ-ಈ ರೀತಿಯಾದ ಅನ್ಯೋನ್ಯ-ಪರಸ್ಪರವಾದ, ವಿಲಕ್ಷ ನಾಚಿಕೆಯುಳ್ಳ. ದೃಷ್ಟಿ-ನೋಟವಲ್ಲ, ಚತುರೇ-ಸಮರ್ಥವಾದ, ತಸ್ಮಿನ್ ಆ. ಅವಸ್ಥಾಂತರೇ-ಕೋಪವನ್ನು ಶಮನಗೊಳಿಸುವ ಸನ್ನಿವೇಶದಲ್ಲಿ, ಮಯಾ-ನನ್ನಿಂದ, ಸವ್ಯಾಜಂ ಏನೋ ಕಾರಣವನ್ನು ಸೂಚಿಸುತ್ತಾ, ಹಸಿತಂ-ನಗಲ್ಪಟ್ಟಿತು. ಧೃತಿಹರಃ-ಧೈರ್ಯವನ್ನು ನಿವಾರಿಸುವ, ಬಾಷ್ಪಸ್ತು-ಕಣ್ಣೀರಾದರೋ, ತಯಾ-ಅವಳಿಂದ, ಮುಕ್ತಃ-ಬಿಡಲ್ಪಟ್ಟಿತು.

ನನ್ನ ಪ್ರಿಯತಮೆ ನನ್ನ ವಿಷಯದಲ್ಲಿ ಯಾವ ಭಾವನೆಯನ್ನು ಹೊಂದಿರುವಳೆಂಬುದನ್ನು ನೋಡಲು ನಾನು ಮೌನದಿಂದ ಕುಳಿತೆನು. ಈ ಶಠನಾದ ನನ್ನ ಪ್ರಿಯನು ನನ್ನೊಡನೆ ಮೌನವನ್ನೇಕೆ ತಾಳಿರುವನು? ಎಂದು ಅವಳೂ ಕೋಪದಿಂದ ಕುಳಿತುಬಿಟ್ಟಳು. ಈ ರೀತಿಯಲ್ಲಿ ಇಬ್ಬರೂ ಒಬ್ಬರನ್ನೊಬ್ಬರು ನಾಚಿಕೆಯಿಂದ ನೋಡುತ್ತ ಆ ಸ್ಥಿತಿಯನ್ನು ಪರಿಹರಿಸಬೇಕೆಂದಿರುವಾಗ ಏನೋ ಕಾರಣವನ್ನು ಸೂಚಿಸಿ ನಾನು ನಕ್ಕೆ. ಆಗ ನನ್ನ ಪ್ರಿಯತಮೆಯ ಧೈರ್ಯವೂ ಕುಸಿದು ಬಿದ್ದು ಆಕೆ ಕಣ್ಣೀರನ್ನು ಕರೆದಳು.

೫೫

ವಿರಹವ್ಯಥೆ

**ತನ್ವಂಗ್ಯಾ ಗುರುಸನ್ನಿಧೌ ನಯನಯೋರ್ಯದ್ವಾರಿ ಸಂಸ್ತಂಭಿತಂ**
**ತೇನಾಂತರ್ಗಲಿತೇನ ಮನ್ಮಥಶಿಖೀ ಸಿಕ್ತೋ ವಿಯೋಗೋದ್ಭವಃ**
**ಮನ್ಯೇ ತಸ್ಯ ನಿರಸ್ಯಮಾನಕಿರಣಸ್ಯೈಷಾ ಮುಖೇನೋದ್ಗತಾ**
**ಶ್ವಾಸಾಯಾಸಸಮಾಕುಲಾಲಿಸರಣಿವ್ಯಾಜೇನ ಧೂಮಾವಲೀ ॥**

ಗುರುಸನ್ನಿಧೌ-ದೊಡ್ಡವರ ಸಮೀಪದಲ್ಲಿ, ತನ್ವಂಗ್ಯಾಃ-ಕೃಶಾಂಗಿಯಾದ ಯುವತಿಯ, ಯತ್-ಯಾವ, ನಯನಯೋಃ-ಕಣ್ಣುಗಳ, ವಾರಿ-ನೀರು, ಸಂಸ್ತಂಭಿತಂ-ಕಣ್ಣಿನಲ್ಲಿಯೇ ತಡೆಯಲ್ಪಟ್ಟಿತೋ, ಅಂತರ್ಗಲಿತೇನ-ಒಳಗೆ ಅಡಗಿದ, ತೇನ-ಆ ಕಣ್ಣೀರಿನಿಂದ, ವಿಯೋಗೋದ್ಭವಃ-ಪ್ರಿಯನ ಅಗಲಿಕೆಯಿಂದ ಉಂಟಾದ, ಮನ್ಮಥಶಿಖೀ-ಕಾಮವೆಂಬ ಬೆಂಕಿ, ಸಿಕ್ತಃ-ಆರಿಸಲ್ಪಟ್ಟಿತು. ನಿರಸ್ಯಮಾನ-ಆರಿಹೋಗುವ, ಕಿರಣಸ್ಯ-ಜ್ವಾಲೆಯುಳ್ಳ, ತಸ್ಯ-ಆ ಬೆಂಕಿಯ, ಏಷಾ-ಈ, ಧೂಮಾವಲೀ-ಹೊಗೆಯ ಸಮೂಹ, ಶ್ವಾಸ-ಸುಗಂಧಮಯವಾದ ಉಸುರಿನ, ಆಯಾಸ-ಬಿಸಿಯ ಬಳಲಿಕೆಯಿಂದ, ಸಮಾಕುಲ-ಚೆದುರಿ ಹಾರಾಡುವ, ಅಲಿಸರಣಿ-ದುಂಬಿಗಳ ಗುಂಪಿನ, ವ್ಯಾಜೇನ-ನೆಪದಿಂದ, ಮುಖೇನ-ಅವಳ ಮುಖದಿಂದ, ಉದ್ಗತಾ-ಹೊರಹೊರಟಿತು. ಎಂದು ಮನ್ಯೇ-ತಿಳಿಯುತ್ತೇನೆ.

ಪ್ರಿಯತಮನ ಅಗಲಿಕೆಯಿಂದ ಶೋಕಿಸುತ್ತಿದ್ದ ತರುಣಿ ದೊಡ್ಡವರ ಸಮೀಪದಲ್ಲಿ ಒತ್ತಿಬರುತ್ತಿದ್ದ ಕಣ್ಣೀರನ್ನು ಹಾಗೆಯೇ ತಡೆದಳು-ಅದರಿಂದ ಒಳಗಡೆಯೇ ಅಡಗಿದ್ದ ಪ್ರಿಯನ ವಿರಹದಿಂದ ಉಂಟಾದ ಕಾಮಾಗ್ನಿ ಆ ಕಣ್ಣೀರಿನಿಂದ ಆರಿಹೋಯಿತು. ಕಾಂತಿಯನ್ನು ಕಳೆದುಕೊಂಡು ಆರುವ ಆ ಬೆಂಕಿಯ ಹೊಗೆ ಸುಗಂಧಮಯವಾದ ಅವಳ ಉಸಿರನ್ನು ಸೇವಿಸಲು ಬಂದು, ಆದರೆ ಅದರ ಬಿಸಿಯನ್ನು ತಾಳಲಾರದೆ ಚೆದುರಿ ಹಾರಾಡುವ ದುಂಬಿಗಳ ಗುಂಪಿನ ನೆಪದಿಂದ ಅವಳ ಮುಖದಿಂದ ಹೊರಹೊಮ್ಮುತ್ತಿದೆ ಎಂದು ತಿಳಿಯುತ್ತೇನೆ.

೫೬

ಕಳವಳ

**ಕಥಮಪಿ ಕೃತಪ್ರತ್ಯಾಖ್ಯಾನೇ ಪ್ರಿಯೇ ಸ್ಖಲಿತೋತ್ತರೇ**
**ವಿರಹಕೃಶಯಾ ಕೃತ್ವಾ ವ್ಯಾಜಂ ಪ್ರಕಲ್ಪಿತಮಶ್ರುತಂ ।**
**ಅಸಹನಸಖೀಶ್ರೋತ್ರಪ್ರಾಪ್ತಿಪ್ರಮಾದಸಸಂಭ್ರಮಂ**
**ವಿಗಲಿತದೃಶಾ ಶೂನ್ಯೇ ಗೇಹೇ ಸಮುಚ್ಛ್ವಸಿತಂ ಪುನಃ ॥**

ಕೃತ ಮಾಡಲ್ಪಟ್ಟ, ಪ್ರತ್ಯಾಖ್ಯಾನೇ-ತಿರಸ್ಕಾರವುಳ್ಳ, ಪ್ರಿಯೇ-ಪ್ರಿಯನು, ಕಥಂ ಅಪಿ-ಅಕಸ್ಮಾತ್ತಾಗಿ, ಸ್ಖಲಿತೋತ್ತರೇ-(ಪರಸ್ತ್ರೀ ಹೆಸರನ್ನು) ಮರೆತು ಹೇಳಿದ ಉತ್ತರವುಳ್ಳವನಾಗಲು, ವಿರಹಕೃಶಯಾ-ಪತಿವಿರಹವನ್ನು ಸಹಿಸಲಾರದೆ ಕೃಶಳಾಗಿದ್ದ ಪ್ರಿಯೆಯಿಂದ, ವ್ಯಾಜಂ-ಬೇರೆ ನೆಪವನ್ನು, ಕೃತ್ವಾ-ಮಾಡಿ, ಅಶ್ರುತಂ-ಕೇಳದಿರುವಂತೆ, ಪ್ರಕಲ್ಪಿತಂ-ನಟಿಸಲ್ಪಟ್ಟಿತು ಅಸಹನ-ಸಹಿಸಲಾರದ, ಸಖೀ ಗೆಳತಿಯ, ಶ್ರೋತ್ರ-ಕಿವಿಗಳಿಗೆ, ಪ್ರಾಪ್ತಿ-ಹೊಂದಿದ, ಪ್ರಮಾದ- ಅಚಾತುರ್ಯದಿಂದ. ಸಸಂಭ್ರಮಂ-ಕಳವಳ ಭಾವದಿಂದ, ಪುನಃ-ಮತ್ತೆ, ವಿಗಲಿತದೃಶಾ-ಕೆದರಿದ ಕಣ್ಣುಗಳಿಂದ, ಶೂನ್ಯೇ-ಯಾರೂ ಇಲ್ಲದ, ಗೇಹೇ-ಮನೆಯಲ್ಲಿ, ಸಮುಚ್ಛ್ವಸಿತಂ-ನಿಟ್ಟುಸಿರು ಬಿಡಲ್ಪಟ್ಟಿತು.

ಪ್ರಿಯೆತಮೆಯು ತನ್ನನ್ನು ತಿರಸ್ಕರಿಸಿದರೂ ಇನಿಯನು ಅಕಸ್ಮಾತ್ತಾಗಿ ಬೇರೊಬ್ಬಳ ಹೆಸರನ್ನು ನುಡಿದನು. ವಿರಹದಿಂದ ಕೃಶಳಾದ ಅವನ ಪ್ರಿಯೆ ಬೇರೊಂದು ನೆಪವನ್ನು ಹೂಡಿ ಅದನ್ನುಕೇಳದವಳಂತೆ ನಟಿಸಿದಳು. ತನ್ನ ಇನಿಯನು ನುಡಿದ ಸವತಿಯ ಹೆಸರನ್ನು ತನ್ನ ಗೆಳತಿಯರೆಲ್ಲಿ ಕೇಳುವರೋ ಎಂಬ ಕಳವಳದಿಂದ ಯಾರೂ ಇಲ್ಲದ ಮನೆಯಲ್ಲಿ ಕಣ್ಣೆರಿಟ್ಟು ನಿಟ್ಟುಸಿರನ್ನು ಬಿಟ್ಟಳು.

೫೭

ಪ್ರಣಯಕೋಪ ಶಮನ

**ನಾಪೇತೋನುನಯೇನ ಯಃ ಪ್ರಿಯಸುಹೃದ್ವಾಕ್ಯೈರ್ನ ಯಃ ಸಂಹೃತೋ**
**ಯೋ ದೀರ್ಘಂ ದಿವಸಂ ವಿಷಹ್ಯ ವಿಷಮಂ ಯತ್ನಾತ್ಕಥಂ ಚಿದ್ಧೃತಃ ।**

**ಅನ್ಯೋನ್ಯಸ್ಯ ಹೃತೇ ಮುಖೇ ನಿಹಿತಯೋಸ್ತಿರ್ಯಕ್ಕಥಂ ಚಿದ್ದೃಶೋಃ**
**ಸ ದ್ವಾಭ್ಯಾಮತಿವಿಸ್ಮೃತವ್ಯತಿಕರೋ ಮಾನೋ ವಿಹ ಸ್ಯೋಜ್ಝಿತಃ ॥**

ಯಃ-ಯಾವ ಕೋಪವು, ಅನುನಯೇನ-ಅನುಸರಣೆಯಿಂದ, ನ ಅಪೇತಃ-ಹೋಗಲಿಲ್ಲವೋ, ಯಃ-ಯಾವ ಕೋಪವು, ಪ್ರಿಯಸುಹೃದ್ವಾಕ್ಯೈಃ-ಆಪ್ತರಾದ ಗೆಳತಿಯರ ಮಾತುಗಳಿಂದ, ನ ಸಂಹೃತಃ-ಕಡಮೆಯಾಗಲಿಲ್ಲವೋ, ಯಃ-ಯಾವ ಕೋಪವು, ದೀರ್ಘಂ-ಹೆಚ್ಚಾದ, ದಿವಸಂ-ಹಗಲನ್ನು, ವಿಷಮಂ-ಕಷ್ಟಕರವನ್ನಾಗಿ, ವಿಷಹ್ಯ-ಸಹಿಸಿಕೊಂಡು, ಯತ್ನಾತ್-ಬಹು ಪ್ರಯಾಸದಿಂದ, ಕಥಂಚಿತ್-ಕಡಮೆಯಾಗುವುದೆಂಬ ಶಂಕೆಯಿಂದ, ಧೃತಃ-ಕಾಪಾಡಿಕೊಂಡು ತರಲ್ಪಟ್ಟಿತೋ, ಸಃ ಮಾನಃ ಆ ಪ್ರಣಯ ಕೋಪವು, ಅನ್ಯೋನ್ಯಸ್ಯ-ಪರಸ್ಪರ ಇನಿಯರ ಮುಖೇ-ಎರಡು ಮುಖಗಳೂ, ಹೃತೇ-ಬೇರೊಂದು ಕಡೆಗೆ ತಿರುಗಿಸಲ್ಪಡಲು, ಕಥಂಚಿತ್-ಅಕಸ್ಮಾತ್ತಾಗಿ, ದೃಶೋಃ-ಅವರಿಬ್ಬರ ದೃಷ್ಟಿಗಳೂ, ತಿರ್ಯಕ್-ಅಡ್ಡಲಾಗಿ, ನಿಹಿತಯೋಃ-ಒಟ್ಟುಗೂಡಲಾಗಿ, ದ್ವಾಭ್ಯಾಂ-ಅವರಿಬ್ಬರಿಂದಲೂ, ವಿಹಸ್ಯ-ನಕ್ಕು, ಅತಿವಿಸ್ಮೃತವ್ಯತಿಕರಃ-ಪೂರ್ಣವಾಗಿ ಮರೆಯಲ್ಪಟ್ಟ ಹಿಂದಿನ ಪ್ರಣಯ ಕೋಪದ ಸಂಬಂಧವುಳ್ಳದ್ದಾಗಿ, ಉಜ್ಝಿತಃ-ಬಿಡಲ್ಪಟ್ಟಿತು.

ಪ್ರಯಣಕೋಪವು ಅನುನಯದಿಂದ ಹೋಗಲಿಲ್ಲ. ಆಪ್ತರಾದ ಗೆಳತಿಯರ ಹಿತನುಡಿಗಳಿಂದ ಕಡಮೆಯಾಗಲಿಲ್ಲ. ವಿರಹವ್ಯಥೆಯನ್ನು ಅನುಭವಿಸುತ್ತ ದಿನಗಳನ್ನು ಕಷ್ಟಸಾಧ್ಯದಿಂದ ಕಳೆದರೂ ಆ ಕೋಪ ಶಾಂತವಾಗಲಿಲ್ಲ. ಅಂಥ ಪ್ರಣಯ ಕೋಪವು ಆ ಇನಿಯರು ಪರಸ್ಪರ ಎರಡು ಮುಖಗಳನ್ನೂ ಬೇರೆ ಕಡೆಗೆ ತಿರುಗಿಸಿದ್ದರೂ, ಅಕಸ್ಮಾತ್ತಾಗಿ ಅವರಿಬ್ಬರ ನೋಟಗಳು ಒಟ್ಟುಗೂಡಿ, ನಲ್ಲನಲ್ಲೆಯರು ನಕ್ಕು ತಮ್ಮ ಹಿಂದಿನ ಪ್ರಣಯಕೋಪವನ್ನು ಮರೆತು ಬಿಟ್ಟರು.

೫೮

ಪ್ರಣಯ ಕೋಪವನ್ನು ನಾನು ನಟಿಸುವಂತೆ ಮಾಡುವುದು ಮಾತ್ರ ದೈವಕ್ಕೆ ಸೇರಿದ್ದು

**ಭ್ರೂಭೇದೋ ಗುಣಿತಶ್ಚಿರಂ ನಯನಯೋರಭ್ಯಸ್ತಮಾಮೀಲನಂ**
**ರೋದ್ಧುಂ ಶಿಕ್ಷಿತಮಾದರೇಣ ಹಸಿತಂ ಮೌನೇಭಿಯೋಗಃ ಕೃತಃ**
**ಧೈರ್ಯಂ ಕರ್ತುಮಪಿ ಸ್ಥಿರೀಕೃತಮಿದಂ ಚೇತಃ ಕಥಂಚಿನ್ಮಯಾ**
**ಬದ್ಧೋ ಮಾನಪರಿಗ್ರಹೇ ಪರಿಕರಃ ಸಿದ್ಧಿಸ್ತು ದೈವೇ ಸ್ಥಿತಾ ||**

ಭ್ರೂಭೇದಃ-ಹುಬ್ಬನ್ನು ವಕ್ರಗೊಳಿಸುವ ಕಾರ್ಯವು, ಚಿರಂ-ಬಹು ಕಾಲದಿಂದ, ಗುಣಿತಃ ಹೆಚ್ಚುಹೆಚ್ಚಾಗಿ ಬೆಳೆಸಲ್ಪಟ್ಟಿತು. ನಯನಯೋಃ-ಎರಡುಕಣ್ಣುಗಳ, ಆಮೀಲನಂ-ಮುಚ್ಚುವಿಕೆ, ಅಭ್ಯಸ್ತಂ-ಅಭ್ಯಾಸ ಮಾಡಲ್ಪಟ್ಟಿತು. ಹಸಿತಂ-ಮುಗುಳ್ನಗೆಯನ್ನು, ರೋದ್ಧುಂ-ತಡೆಯು ವುದಕ್ಕೆ, ಆದರೇಣ-ಹೆಚ್ಚು ಶ್ರದ್ಧೆಯಿಂದ, ಶಿಕ್ಷಿತಂ-ಅಭ್ಯಾಸಮಾಡಲ್ಪಟ್ಟಿತು. ಮೌನೇ-ಮಾತನಾಡದಿರುವ ಕಾರ್ಯದಲ್ಲಿ, ಅಭಿಯೋಗಃ-ವಿಶೇಷ ಪ್ರಯತ್ನವು, ಕೃತಃ-ಮಾಡಲ್ಪಟ್ಟಿತು. ಧೈರ್ಯಂ-ಧೀರಸ್ವಭಾವ ವನ್ನು, ಕರ್ತುಂ ಅಪಿ-ಮಾಡುವುದಕ್ಕೂ ಕೂಡ, ಮಯಾ-ನನ್ನಿಂದ, ಇದಂ-ಈ (ಚಂಚಲವಾದ) ಚೇತಃ-ಮನಸ್ಸು, ಕಥಂಚಿತ್-ಬಹುಶ್ರಮ ಪಟ್ಟು, ಸ್ಥಿರೀಕೃತಂ ಸ್ಥಿರಗೊಳಿಸಲ್ಪಟ್ಟಿತು. ಮಾನಪರಿಗ್ರಹೇ-ಕೋಪ ವನ್ನು ಸ್ವೀಕರಿಸುವ (ನಟಿಸುವ) ಕಾರ್ಯದಲ್ಲಿ, ಪರಿಕರಃ-ಸಿದ್ಧತೆ, ಬದ್ಧಃ-ಸರಿಪಡಿಸಲ್ಪಟ್ಟಿತು. ತು-ಆದರೆ, ಸಿದ್ಧಿಃ-ನನ್ನ ಇನಿಯನೆಮರಿಸಲ್ಲಿ ನಡೆ ಯುವ ಕಾರ್ಯವು ಮಾತ್ರ, ದೈವೇ-ದೇವರಲ್ಲಿ, ಸ್ಥಿತಾ-ಇರುವುದು.

ನನ್ನ ಇನಿಯನೆದುರಿಗೆ ಪ್ರಣಯ ಕೋಪವನ್ನು ನಟಿಸಿ ಜಯ ಪಡೆಯುವುದಕ್ಕೆ ಹುಬ್ಬನ್ನು ಕೊಂಕುಗೊಳಿಸಲು ಬಹುಕಾಲ ಅಭ್ಯಾಸ ಮಾಡಿದ್ದೇನೆ. ನನ್ನೆರಡು ಕಣ್ಣುಗಳನ್ನೂ ಮುಚ್ಚುವಿಕೆ, ಮುಗುಳುನಗೆ ಯನ್ನು ತಡೆಯುವಿಕೆ, ಮೌನವನ್ನು ಹಿಡಿದಿರುವಿಕೆ ಇವುಗಳನ್ನು ಬಹು ಶ್ರಮಪಟ್ಟು ಶ್ರದ್ಧೆಯಿಂದ ಕಲಿತಿರುವೆನು. ಪ್ರಿಯತಮನ ಮುಂಭಾಗದಲ್ಲಿ

ಧೈರ್ಯದಿಂದಿರಲು ಈ ನನ್ನ ಚಂಚಲವಾದ ಮನಸ್ಸನ್ನು ಬಹುಶ್ರಮಪಟ್ಟು ಗಟ್ಟಿಮಾಡಿಕೊಂಡಿದ್ದೇನೆ. ಪ್ರಣಯ ಕೋಪವನ್ನು ನನ್ನಿಯನೆದುರಿನಲ್ಲಿ ನಟಿಸಲು ಎಲ್ಲ ಸಿದ್ಧತೆಗಳನ್ನು ಮಾಡಿಕೊಂಡಿರುವೆನು. ಆದರೆ ಅದನ್ನು ನಡೆಸುವ ಕಾರ್ಯ ಮಾತ್ರ ದೇವರಿಗೆ ಸೇರಿದ್ದು.

೫೯

ಪ್ರಣಯಕೋಪದ ನಿರ್ವಹಣ ಬಹುಕಷ್ಟ

**ಭ್ರೂಭಂಗೇ ರಚಿತೇಽಪಿ ದೃಷ್ಟಿರಧಿಕಂ ಸೋತ್ಕಂಠಮುದ್ವೀಕ್ಷತೇ**
**ರುದ್ಧಾಯಾಮಪಿ ವಾಚಿ ಸಸ್ಮಿತಮಿದಂ ದಗ್ಧಾನನಂ ಜಾಯತೇ**
**ಕಾರ್ಕಶ್ಯಂ ಗಮಿತೇಽಪಿ ಚೇತಸಿ ತನೂ ರೋಮಾಂಚ**
**ಮಾಲಂಬತೇ**
**ದೃಷ್ಟೇ ನಿರ್ವಹಣಂ ಭವಿಷ್ಯತಿ ಕಥಂ ಮಾನಸ್ಯ ತಸ್ಮಿನ್ ಜನೇ ||**

ಭ್ರೂಭಂಗೇ-ಹುಬ್ಬು ಗಂಟುಹಾಕುವಿಕೆ, ರಚಿತೇ ಅಪಿ-ಕಷ್ಟದಿಂದ ನಟಿಸಲ್ಪಟ್ಟರೂ, ದೃಷ್ಟಿಃ-(ನನ್ನ) ನೋಟವು, ಅಧಿಕಂ-ಹೆಚ್ಚಾಗಿ ಸೋತ್ಕಂಠಂ-ಉದ್ವೇಗದಿಂದ ಕೂಡಿ, ಉದ್ವೀಕ್ಷತೇ- (ಇನಿಯನನ್ನೇ) ನೋಡುತ್ತದೆ. ವಾಚಿ-ಮಾತು, ರುದ್ಧಾಯಾಮಪಿ-(ಕಷ್ಟದಿಂದ) ನಿಲ್ಲಿಸಿ ದಾಗಲೂ, ಇದಂ-ಈ, ದಗ್ಧಾನನಂ-(ನನ್ನ) ಕೆಟ್ಟಮುಖವು, ಸಸ್ಮಿತಂ-ಮುಗುಳ್ನಗೆಯಿಂದ ಕೂಡಿದ್ದಾಗಿ, ಜಾಯತೇ-ಉಂಟಾಗುತ್ತದೆ. ಚೇತಸಿ-ಮನಸ್ಸು, ಕಾರ್ಕಶ್ಯಂ ಕಠಿಣಸ್ವಭಾವವನ್ನು, ಗಮಿತೇ ಅಪಿ-ಹೊಂದಿಸಲ್ಪಟ್ಟಾಗಲೂ, ತನುಃ ನನ್ನ ಶರೀರವು, ರೋಮಾಂಚಂ-ಪುಲಕವನ್ನು, ಆಲಂಬತೇ-ಆಶ್ರಯಿಸುತ್ತದೆ. ತಸ್ಮಿನ್ ಜನೇ-ಆ ಮನುಷ್ಯನು (ಇನಿಯನು) ದೃಷ್ಟೇ ಸತಿ-ನೋಡಲ್ಪಡಲಾಗಿ, ಮಾನಸ್ಯ-ಪ್ರಣಯಕೋಪದ, ನಿರ್ವಹಣಂ ನಡೆಸುವಿಕೆ, ಕಥಂ-ಹೇಗೆ, ಭವಿಷ್ಯತಿ-ಆಗುವುದೋ (ನಾನರಿಯೆ).

ಪ್ರಣಯಕೋಪದಲ್ಲಿ ಬಹು ಕಷ್ಟದಿಂದ ನಾನು ಹುಬ್ಬನ್ನು ಗಂಟಿಕ್ಕಿದರೂ ನನ್ನ ದೃಷ್ಟಿ ಮಾತ್ರ ವಿಶೇಷವಾಗಿ ಉದ್ವೇಗದಿಂದ ಕೂಡಿ ಇನಿಯನನ್ನೇ ನೋಡುತ್ತದೆ. ಬಹು ಕಷ್ಟದಿಂದ ಮಾತನ್ನು

ತಡೆದರೂ ಈ ನನ್ನ ಸುಟ್ಟುಮೋರೆ ಮುಗುಳುನಗೆಯನ್ನು ಬೀರುತ್ತದೆ. ಇನಿಯನ ವಿಷಯದಲ್ಲಿ ಮನಸ್ಸನ್ನು ಕಲ್ಲಾಗಿಸಿದರೂ ನನ್ನ ದೇಹ ಮಾತ್ರ ಅವನನ್ನು ನೋಡಿದೊಡನೆ ರೋಮಾಂಚಗೊಳ್ಳುತ್ತದೆ. ಪ್ರಿಯನನ್ನು ನೋಡುತ್ತಲೇ ಈ ಪ್ರಣಯಕೋಪದ ನಿರ್ವಹಣೆ ಹೇಗೆ ಸಾಧ್ಯವೋ ನಾನರಿಯೆ.

೬೦

ಇನಿಯನನ್ನು ನೋಡುತ್ತಲೇ ಪ್ರಣಯ ಕೋಪ ಮಾಯವಾಗುತ್ತದೆ.

**ತದ್ವಕ್ತ್ರಾಭಿಮುಖಂ ಮುಖಂ ವಿನಮಿತಂ ದೃಷ್ಟಿಃ ಕೃತಾ**
**ಪಾದಯೋಃ**
**ತಸ್ಯಾಲಾಪಕುತೂಹಲಾಕುಲತರೇ ಶ್ರೋತ್ರೇ ನಿರುದ್ಧೇ ಮಯಾ**
**ಪಾಣಿಭ್ಯಾಂ ಚ ತಿರಸ್ಕೃತಃ ಸಪುಲಕಃ ಸ್ವೇದೋದ್ಗಮೋ**
**ಗಂಡಯೋಃ**
**ಸಖ್ಯಃ ಕಿಂ ಕರವಾಣಿ ಯಾಂತಿ ಶತಧಾ ಯತ್ಕಂಚುಕೇ**
**ಸಂಧಯಃ ||**

ಸಖ್ಯಃ-ಗೆಳತಿಯರೇ, ತದ್ವಕ್ತ್ರಾಭಿಮುಖಂ-ಪ್ರಿಯನ ಮುಖಕ್ಕೆ ಎದುರಾದ, ಮುಖಂ-ನನ್ನ ಮುಖವು, ವಿನಮಿತಂ-(ಕೂಡಲೇ) ಬಗ್ಗಿಸಲ್ಪಟ್ಟಿತು. ದೃಷ್ಟಿಃ-ನನ್ನ ನೋಟವು, ಪಾದಯೋಃ-ನನ್ನ ಕಾಲುಗಳ ಮೇಲೆ, ಕೃತಾ ಮಾಡಲ್ಪಟ್ಟಿತು. ತಸ್ಯ-ಆ ನನ್ನ ಇನಿಯನ, ಆಲಾಪ ಕುತೂಹಲಾಕುಲತರೇ-ಮಾತುಗಳ ಸರಣಿಯನ್ನು ಕೇಳಲು ಆತುರಪಡುತ್ತಿದ್ದ, ಶ್ರೋತ್ರೇ-(ನನ್ನ) ಎರಡುಕಿವಿಗಳೂ, ಮಯಾ ನನ್ನಿಂದ, ನಿರುದ್ಧೇ-ಮುಚ್ಚಲ್ಪಟ್ಟವು. ಗಂಡಯೋಃ-ಕೆನ್ನೆಗಳಲ್ಲಿ, ಸಪುಲಕಃ-ರೋಮಾಂಚದಿಂದ ಕೂಡಿದ, ಸ್ವೇದೋದ್ಗಮಃ-ಬೆವರಿನ ಹನಿ, ಪಾಣಿಭ್ಯಾಂ-(ನನ್ನ) ಎರಡು ಕೈಗಳಿಂದಲೂ, ತಿರಸ್ಕೃತಃ-ಒರೆಸಲ್ಪಟ್ಟಿತು. ಯತ್-ಏಕೆಂದರೆ, ಕಂಚುಕೇ-ನನ್ನ ರವಿಕೆಯ ಬಳಭಾಗದಲ್ಲಿ, ಸಂಧಯಃ-ಸಂಧಿಪ್ರದೇಶಗಳು, ಶತಧಾ-ನಾನಾ ರೀತಿಯಲ್ಲಿ, ಯಾಂತಿ-ವಿಶಾಲವಾಗುತ್ತವೆ. ಕಿಂ ಕರವಾಣಿ-ಏನನ್ನು ತಾನೇ ಮಾಡಲಿ ?

ಗೆಳತಿಯರೇ, ನನ್ನ ಪ್ರಿಯನ ಮುಖಕ್ಕೆ ನನ್ನ ಮುಖ ಎದುರಾಗುತ್ತಲೇ ಅದನ್ನು ತಗ್ಗಿಸಿ ನನ್ನ ಕಾಲುಗಳ ಮೇಲೆ ದೃಷ್ಟಿಯನ್ನು ಹೊರಳಿಸಿದೆನು. ನನ್ನ ಇನಿಯನ ಮಾತುಗಳನ್ನು ಕೇಳುವ ಕುತೂಹಲವಿದ್ದರೂ ಕಿವಿಗಳನ್ನು ಮುಚ್ಚಿಕೊಂಡನು. ಕೆನ್ನೆಗಳಲ್ಲಿ ರೋಮಾಂಚದಿಂದ ಕೂಡಿದ ಬೆವರಿನ ಹನಿಗಳನ್ನು ನನ್ನೆರಡು ಕೈಗಳಿಂದ ಒರಸಿಕೊಂಡೆ. ಆದರೆ ನನ್ನೆದೆ ಮಾತ್ರ ಅವನ ಸ್ಪರ್ಶಾಪೇಕ್ಷೆಯಿಂದ ನಾನಾ ರೀತಿಯಲ್ಲಿ ವಿಶಾಲವಾಗುತ್ತಿದೆ. ನಾನು ಏನನ್ನು ತಾನೆ ಮಾಡಲಿ ?

೬೧

ಪ್ರಣಯಕೋಪದ ಶಮನ

**ಚರಣಪತನಂ ಸಖ್ಯಾಲಾಪಾ ಮನೋಹರಚಾಟವಃ**
**ಕೃಶತರತನೋರ್ಗಾಢಾಶ್ಲೇಷೋ ಹಠಾತ್ಪರಿಚುಂಬನಂ**
**ಇತಿ ಹಿ ಚಪಲೋ ಮಾನಾರಂಭಸ್ತಥಾಪಿ ಹಿ ನೋತ್ಸಹೇ**
**ಹೃದಯದಯಿತಃ ಕಾಂತಃ ಕಾಮಂ ಕಿಮತ್ರ ಕರೋಮ್ಯಹಂ ||**

ಚರಣಪತನಂ-ಕಾಲಿಗೆ ನಮಸ್ಕರಿಸುವುದು, ಸಖ್ಯಾಲಾಪಾಃ-ಅದನ್ನೇ ಪುಷ್ಟೀಕರಿಸುವ ಸಖಿಯರ ಮಾತುಗಳು, ಮನೋಹರ ಚಾಟವಃ-ಮನಸ್ಸನ್ನು ಆಕರ್ಷಿಸುವ ಚಮತ್ಕಾರದ ನುಡಿಗಳು, ಕೃಶತರ-ಹೆಚ್ಚು ತೆಳುವಾಗಿರುವ, ತನೋಃ-(ನನ್ನ) ಶರೀರದ, ಗಾಢಾಶ್ಲೇಷಃ-ಬಿಗಿಯಾದ ಅಪ್ಪುಗೆ, ಹಠಾತ್-ಬಲಾತ್ಕಾರದಿಂದ, ಚುಂಬನಂ-ಮುತ್ತಿಡುವುದು, ಇತಿ ಹಿ-ಈ ಕಾರಣಗಳಿಂದಲೇ, ಮಾನಾರಂಭಃ-ಕೋಪದ ಆರಂಭವು, ಚಪಲಃ-ಚಂಚಲವಾಯಿತು. ತಥಾಪಿ-ಹಾಗಾದರೂಕೂಡ ನಉತ್ಸಹೇ-ಉತ್ಸಾಹದಿಂದ ಕೂಡಿರುವುದಿಲ್ಲ. ಹಿ-ಏಕೆಂದರೆ, ಹೃದಯದಯಿತಃ-ಮನಸ್ಸಿಗೆ ಪ್ರಿಯನಾದ, ಕಾಂತಃ-ಗಂಡನು, ಕಾಮಂ-ಸ್ವೇಚ್ಛೆಯಾಗಿರುವನಲ್ಲಾ ; ಅಹಂ-ನಾನು, ಕಿಂ ಕರೋಮಿ-ಏನುಮಾಡಲಿ ?

ಕಾಲಿಗೆ ಎರಗುವುದು, ಅದನ್ನು ಪುಷ್ಟೀಕರಿಸುವ ಗೆಳತಿಯರ ಮಾತು, ಮನಸ್ಸನ್ನು ಸೆಳೆಯುವ ಜಾಣತನದ ನುಡಿ, ಬಳ್ಳಿಯಂತೆ ಬಳುಕುವ ನನ್ನ ದೇಹದ ಬಿಗಿಯಾದ ಅಪ್ಪುಗೆ, ಬಲಾತ್ಕಾರವಾಗಿ ಮುತ್ತಿಡುವುದು,

ಈ ಕಾರಣಗಳಿಂದ ನನ್ನ ಇನಿಯನ ವಿಷಯದಲ್ಲಿದ್ದ ಕೋಪ ಚಂಚಲ ವಾಯಿತು. ಆದರೇನು ? ನನ್ನ ಪ್ರಾಣಪ್ರಿಯನು ಸ್ವೇಚ್ಛೆಯಿಂದ ವರ್ತಿ ಸುತ್ತಿರುವನಲ್ಲ ! ನಾನು ಏನು ತಾನೆ ಮಾಡಲಿ ?

೬೨

ಪ್ರಿಯತಮನ ಸಾನ್ನಿಧ್ಯ

**ನ ಜಾನೇ ಸಂಮುಖಾ ಯಾತೇ**
**ಪ್ರಿಯಾಣಿ ವದತಿ ಪ್ರಿಯೇ ।**
**ಸರ್ವಾಣ್ಯಂಗಾನಿ ಕಿಂ ಯಾಂತಿ**
**ನೇತ್ರತಾಂ ಕಿಮು ಕರ್ಣತಾಂ ॥**

ಪ್ರಿಯೇ-ಇನಿಯನು, ಸಂಮುಖಾಯಾತೇ-ನನಗೆ ಇದಿರಾಗಿ ಬರಲು, (ಹಾಗೆ ಬಂದು) ಪ್ರಿಯಾಣಿ-ಪ್ರಿಯಕರವಾದ ಮಾತುಗಳನ್ನು, ವದತಿ (ಸತಿ)-ನುಡಿಯಲಾಗಿ, ಸರ್ವಾಣಿ-(ನನ್ನ) ಎಲ್ಲ, ಅಂಗಾನಿ-ಅವ ಯವಗಳು, ನೇತ್ರತಾಂ-ಕಣ್ಣಿನ ಸ್ವಭಾವವನ್ನು, ಯಾತಿ ಕಿಂ-ಹೊಂದು ವುವೋ (ಇಲ್ಲವೆ), ಕರ್ಣತಾಂ-ಕಿವಿಗಳ ಸ್ವಭಾವವನ್ನು (ಯಾತಿ) ಕಿಮು-ಹೊಂದುವುವೋ, ನ ಜಾನೇ-ತಿಳಿಯಲಾರೆ

ಏಕಾಂತದಲ್ಲಿ ನನ್ನ ಇನಿಯನು ನನಗೆ ಇದಿರಾಗಿ ಬಂದು, ಇನಿ ಮಾತುಗಳನ್ನಾಡಲು, ನನ್ನ ಅಂಗಗಳೆಲ್ಲ ನನಗೆ ಅರಿವಿಲ್ಲದೆಯೇ ಕಣ್ಣಾ ಗುತ್ತವೆ ಇಲ್ಲವೆ ಕಿವಿಯಾಗುತ್ತವೆ.

೬೩

ಚುಂಬನ

**ಅಹಂ ತೇನಾಹೂತಾ ಕಿಮಪಿ ಕಥಯಾಮೀತಿ ವಿಜನೇ**
**ಸಮೀಪೇ ಚಾಸೀನಾ ಸರಸಹೃದಯತ್ವಾದವಹಿತಾ ।**
**ತತಃ ಕರ್ಣೋಪಾಂತೇ ಕಿಮಪಿ ವದತಾಘ್ರಾಯ ವದನಂ**
**ಗೃಹೀತಾ ಧಮ್ಮಿಲ್ಲೇ ಸಖಿ ಸ ಚ ಮಯಾ ಗಾಢಮಧರೇ ॥**

ಕಿಮಪಿ-ಏನನ್ನೋ, ವಿಜನೇ-ಜನವಿಲ್ಲದ ಪ್ರದೇಶದಲ್ಲಿ (ಗುಟ್ಟಾಗಿ), ಕಥಯಾಮಿ-ಹೇಳುತ್ತೇನೆ. ಇತಿ-ಹೀಗೆಂದು, ತೇನ-ಅವನಿಂದ, ಅಹಂ-

ನಾನು, ಆಹೂತಾ-ಕರೆಯಲ್ಪಟ್ಟೆನು. ಚ-ಮತ್ತು, ಸರಸಹೃದಯತ್ವಾತ್-ಅನುರಾಗದಿಂದ ಕೂಡಿದ ಮನಸ್ಸುಳ್ಳಭಾವದಿಂದಲೇ, ಅವಹಿತಾ-ಜಾಗರೂಕಳಾಗಿ (ಆಸೆಯುಳ್ಳವಳಾಗಿ), ಸಮೀಪೇ-ಹತ್ತಿರದಲ್ಲಿ, ಆಸೀನಾ-ಕುಳಿತುಕೊಂಡೆನು. ತತಃ-ಅನಂತರ, ಕರ್ಣೋಪಾಂತೇ-ಕಿವಿಯ ಪಕ್ಕದಲ್ಲಿ, ಕಿಮಪಿ-ಏನನ್ನೊ, ವದತಾ-ಹೇಳುವ, (ಅವನಿಂದ)-ವದನಂ-ಮುಖವನ್ನು, ಆಘ್ರಾಯ-ಮೂಸಿನೋಡಿ, ಧಮ್ಮಿಲ್ಲೇ-ನನ್ನ ಕೇಶಪಾಶದಲ್ಲಿ, ಗೃಹೀತಾ-ಹಿಡಿಯಲ್ಪಟ್ಟೆನು. ಸಖಿ-ಗೆಳತಿಯೇ, ಸ ಚ-ಅವನಾದರೋ, ಮಯಾ-ನನ್ನಿಂದ, ಅಧರೇ-ತುಟಿಯ ಭಾಗದಲ್ಲಿ, ಗಾಢಂ-ಗಟ್ಟಿಯಾಗಿ ಗೃಹೀತಃ-ಹಿಡಿಯಲ್ಪಟ್ಟನು.

'ನಿರ್ಜನವಾದ ಪ್ರದೇಶದಲ್ಲಿ ಏನನ್ನೋ ಗುಟ್ಟಾಗಿ ಹೇಳುವೆನು; ಬಾ' ಎಂದು ಪ್ರಿಯತಮನು ಒಮ್ಮೆ ನನ್ನನ್ನು ಕರೆದನು. ಅವನ ಮಾತನ್ನು ನಂಬಿ ಒಲವುತುಂಬಿದ ಮನಸ್ಸಿನಿಂದ ಕೂಡಿ ಅವನ ಬಳಿ ಕುಳಿತೆನು. ಆ ಬಳಿಕ ನನ್ನ ಕಿವಿಯಲ್ಲಿ ಗುಟ್ಟಾಗಿ ಏನನ್ನೋ ಹೇಳುವೆನೆಂದು ಅವನು ನನ್ನ ಮುಖವನ್ನು ಆಘ್ರಾಣಿಸಿದಂತೆ ಮಾಡಿ ನನ್ನ ತುರುಬನ್ನು ಹಿಡಿದು ಎಲೆ ಗೆಳತಿ. ನನ್ನ ಕೆಳತುಟಿಯ ಮೇಲೆ ಅವನ ತುಟಿಯನ್ನಿಟ್ಟು ಮುತ್ತಿಟ್ಟನು.

೬೪

ಪ್ರಣಯ ಕೋಪದ ಪ್ರದರ್ಶನ ಅಸಾಧ್ಯ

**ಜಾತಾ ನೋತ್ಕಲಿಕಾ ಸ್ತನೌ ನ ಲುಲಿತೌ ಗಾತ್ರಂ ನ ರೋಮಾಂಚಿತಂ**
**ವಕ್ತ್ರಂ ಸ್ವೇದಕಣಾನ್ವಿತಂ ನ ಸಹಸಾ ಯಾವಚ್ಛಠೇನಾಮುನಾ।**
**ದೃಷ್ಟೇನೈವ ಮನೋ ಹೃತಂ ಧೃತಿಮುಷಾ ಪ್ರಾಣೇಶ್ವರೇಣಾದ್ಯ ಮೇ**
**ತತ್ಕೇನಾತ್ರ ನಿರೂಪ್ಯಮಾಣ ನಿಪುಣೋ ಮಾನಃ ಸಮಾಧೀಯತಾಂ ॥**

ಉತ್ಕಲಿತಾ-ಮನಸ್ಸಿನ ಉದ್ವೇಗವು, ನ ಜಾತಾ-ಆಗಲಿಲ್ಲ. ಸ್ತನೌ-ಕುಚಗಳು, ನ ಲುಲಿತಾ-ಅಲುಗಿಸಲ್ಪಡಲಿಲ್ಲ. ಗಾತ್ರಂ-ಶರೀರವು, ನ

ರೋಮಾಂಚಿತಂ-ರೋಮಾಂಚ ಹೊಂದಿಸಲ್ಪಡಲಿಲ್ಲ. ವಕ್ತ್ರಂ-ಮುಖವು, ಸ್ವೇದಕಣ-ಬೆವರಿನ ಹನಿಗಳಿಂದ, ಅನ್ವಿತಂ-ಕೂಡಿದ್ದಾಗಿ, ನ-ಆಗಲಿಲ್ಲ. ಸಹಸಾ-ಶೀಘ್ರವಾಗಿ, ಯಾವತ್-ಎಷ್ಟರಲ್ಲಿ. ದೃಷ್ಟೇನೈವ-ನೋಡಲ್ಪಟ್ಟ, ಶಠೇನ-ವಂಚಕನಾದ, ಅಮುನಾ-ಈ ಇನಿಯದಿಂದ, ಮನಃ-ನನ್ನ ಮನಸ್ಸು, ಹೃತಂ-ಅಪಹರಿಸಲ್ಪಟ್ಟಿತು. ಅದ್ಯ-ಈಗ, ಮೇ-ನನ್ನ, ಧೃತಿಮುಷಾಂ-ಧೈರ್ಯವನ್ನೇ ಅಪಹರಿಸುವ, ಪ್ರಾಣೇಶ್ವರೇಣ ಪ್ರಾಣ ಪ್ರಿಯನಿಂದ, ಅತ್ರ-ಈ ವಿಷಯದಲ್ಲಿ, ನಿರೂಪ್ಯಮಾಣನಿಪುಣಃ-ಬುದ್ಧಿವಂತಿಕೆಯಿಂದ ಕಂಡುಹಿಡಿಯಲ್ಪಡುವ, ಮಾನಃ-ಈ ಪ್ರಣಯಕೋಪವು, ತತ್ಕೇನ-ಆ ಯಾವ ಕ್ರಮದಿಂದ, ಸಮಾಧೀಯತಾಂ-ನಿಲ್ಲಿಸಲ್ಪಡುವುದು ?

ನನ್ನ ಮನಸ್ಸಿಗೆ ಉದ್ವೇಗವುಂಟಾಗಲಿಲ್ಲ. ಸ್ತನಗಳನ್ನು ಅಲುಗಿಸಲಿಲ್ಲ. ದೇಹವು ರೋಮಾಂಚಗೊಳ್ಳಲಿಲ್ಲ. ಮುಖ ಬೆವರುಹನಿಗಳಿಂದ ಕೂಡಲಿಲ್ಲ. ನಾನು ವಂಚಕನಾದ ನನ್ನ ಇನಿಯನನ್ನು ನೋಡುವಷ್ಟರಲ್ಲಿಯೇ ಅವನು ನನ್ನ ಮನಸ್ಸನ್ನು ಅಪಹರಿಸಿದನು. ನನ್ನ ಧೈರ್ಯವನ್ನೇ ಅಪಹರಿಸುವ ಪ್ರಾಣಪ್ರಿಯನ ವಿಷಯದಲ್ಲಿ ತುಂಬ ನೈಪುಣ್ಯದಿಂದ ಸಿದ್ಧಪಡಿಸಿಕೊಂಡಿರುವ ಪ್ರಣಯಕೋಪವನ್ನು ಯಾವ ಕ್ರಮದಿಂದ ಅವನಲ್ಲಿ ಪ್ರಯೋಗಿಸಲಿ ?

೬೫

ಇನಿಯನಲ್ಲಿ ಪ್ರಣಯ ಕೋಪದ ಯೋಚನೆ ಮುರಿದು ಬೀಳುತ್ತದೆ

**ಶ್ರುತ್ವಾ ನಾಮಾಪಿ ಯಸ್ಯ ಸ್ಫುಟಘನಪುಲಕಂ ಜಾಯತೇಂಗಂ ಸಮಂತಾತ್**
**ದೃಷ್ಟ್ವಾ ಯಸ್ಯಾನನೇಂದುಂ ಭವತಿ ವಪುರಿದಂ ಚಂದ್ರಕಾಂತಾನುಕಾರಿ**
**ತಸ್ಮಿನ್ನಾಗತ್ಯ ಕಂಠಗ್ರಹನಿಕಟಪದಸ್ಥಾಯಿನಿ ಪ್ರಾಣನಾಥೇ**
**ಭಗ್ನಾ ಮಾನಸ್ಯ ಚಿಂತಾ ಭವತಿ ಮಯಿ ಪುನರ್ವಜ್ರಮಯ್ಯಾಂ ಕದಾಚಿತ್ ||**

ಯಸ್ಯ-ಯಾವ ಪ್ರಿಯನ, ನಾಮ-ಹೆಸರನ್ನು, ಶ್ರುತ್ವಾ ಅಪಿ-ಕೇಳಿ

ದೊಡನೆಯೇ, ಅಂಗಂ-ನನ್ನ ಅವಯವವು, ಸಮಂತಾತ್ ಎಲ್ಲ ಭಾಗದಲ್ಲಿಯೂ, ಸ್ಫುಟ-ವ್ಯಕ್ತವಾದ, ಘನ-ಅತಿಯಾದ, ಪುಲಕಂ ರೋಮಾಂಚವು- ಜಾಯತೇ-ಉಂಟಾಗುತ್ತದೆಯೋ, ಯಸ್ಯ-ಯಾವ ಗಂಡನ, ಆನನೇಂದುಂ-ಚಂದ್ರಬಿಂಬ ಸದೃಶವಾದ ಮುಖವನ್ನು, ದೃಷ್ಟ್ವಾ-ನೋಡಿ, ಇದಂ-ಈ ನನ್ನ, ವಪುಃ ಶರೀರವು, ಚಂದ್ರಕಾಂತಾನುಸಾರಿ-ಚಂದ್ರಕಾಂತ ಶಿಲೆಯ ಹೋಲಿಕೆಯನ್ನು ಪಡೆಯುವುದೋ, ತಸ್ಮಿನ್-ಅಂತಹ, ಪ್ರಾಣನಾಥೇ-ಪ್ರಾಣಪ್ರಿಯನು, ಆಗತ್ಯ-ಬಂದು, ಕಂಠಗ್ರಹ-ಕಂಠದ ಆಲಿಂಗನಕ್ಕೆ, ನಿಕಟ-ಸಮೀಪವಾಗಿರುವ, ಪದ-ಸ್ಥಳದಲ್ಲಿ, ಸ್ಥಾಯಿನಿ-ನಿಲ್ಲಲಾಗಿ, ಕದಾಚಿತ್-ಒಂದೊಂದು ಸಾರಿ, ವಜ್ರಮಯ್ಯಾಂ-ವಜ್ರದಷ್ಟು ಕಠಿನಳಾದ, ಮಯಿಪುನಃ-ನನ್ನಲ್ಲಿಯಾದರೋ, ಮಾನಸ್ಯ-ಕೋಪದ, ಚಿಂತಾ-ಯೋಚನೆ, ಭಗ್ನಾ-ಮುರಿದು ಹೋದದ್ದಾಗಿ, ಭವತಿ-ಆಗುತ್ತದೆ.

ನನ್ನ ಪ್ರಿಯನ ಹೆಸರನ್ನು ಕೇಳಿದೊಡನೆಯೇ ನನ್ನ ಅಂಗಾಂಗಗಳೆಲ್ಲ ಪುಳಕಿತವಾಗುವುವು. ನನ್ನ ಇನಿಯನ ಮುಖಚಂದ್ರವನ್ನು ನೋಡಿದೊಡನೆಯೇ ನನ್ನ ದೇಹ ಚಂದ್ರಕಾಂತಶಿಲೆಯಂತೆ ತಂಪಾಗುವುದು. ಅಂತಹ ಪ್ರಾಣಪ್ರಿಯನು ನನ್ನಲ್ಲಿಗೆ ಬಂದು ನನ್ನ ಕತ್ತನ್ನು ಆಲಿಂಗಿಸಿಕೊಳ್ಳಲು ನಿಂತೊಡನೆಯೇ ಒಮ್ಮೊಮ್ಮೆ ವಜ್ರದಷ್ಟು ಕಠಿನಳಾದ ನನ್ನಲ್ಲಿಯೂ ಕೂಡ ಪ್ರಣಯಕೋಪದ ಯೋಚನೆ ಮುರಿದು ಬೀಳುತ್ತದೆ.

೬೬

ಪರಿತಾಪ

**ನಿಃಶ್ವಾಸಾ ವದನಂ ದಹಂತಿ ಹೃದಯಂ ನಿರ್ಮೂಲಮುನ್ಮಥ್ಯತೇ**
**ನಿದ್ರಾ ನ್ಯೈತಿ ನ ದೃಶ್ಯತೇ ಪ್ರಿಯಮುಖಂ ನಕ್ತಂ ದಿವಂ ರುದ್ಯತೇ**
**ಅಂಗಂ ಶೋಷಮುಪೈತಿ ಪಾದಪತಿತಃ ಪ್ರೇಯಾಂಸ್ತದೋ**
**ಪೇಕ್ಷಿತಃ**
**ಸಖ್ಯಃ ಕಂ ಗುಣಮಾಕಲಯ್ಯ ದಯಿತೇ ಮಾನಂ ವಯಂ**
**ಕಾರಿತಾ**

ಸಖ್ಯಃ-ಎಲೌ ಗೆಳತಿಯರೇ, ನಿಃಶ್ವಾಸಾಃ-(ನನ್ನ) ಬಿಸಿಯುಸಿರು, ವದನಂ-(ನನ್ನ) ಮುಖವನ್ನು, ದಹಂತಿ-ಸುಡುತ್ತವೆ. ಹೃದಯಂ-

ಮನಸ್ಸು, ನಿಮೂ೯ಲಂ-ಕಾರಣವಿಲ್ಲದೆ, ಉನ್ಮಥ್ಯತೇ-ಉದ್ವೇಗಗೊಳ್ಳು ತ್ತಿದೆ (ಕುದಿಯುತ್ತಿದೆ). ನಿದ್ರಾ-ನಿದ್ದೆಯು, ನ ಏತಿ-ಬರುವುದಿಲ್ಲ. ಪ್ರಿಯ ಮುಖಂ-ಪ್ರಿಯನ ಮುಖವು, ನ ದೃಶ್ಯತೇ-ಕಾಣಲ್ಪಡುವುದಿಲ್ಲ. ನಕ್ತಂ ದಿವಂ-ಹಗಲು ರಾತ್ರಿಯೂ, ರುದ್ಯತೇ-ಗೋಳಾಡಲ್ಪಡುತ್ತಿದೆ. ಅಂಗಂ-ಅವಯವವು, ಶೋಷಂ-ಕ್ಷೀಣತೆಯನ್ನು, ಉಪೈತಿ-ಹೊಂದುತ್ತಿದೆ. ಪಾದ ಪತಿತಃ-ಕಾಲಿಗೆ ನಮಸ್ಕಾರಮಾಡಿದ, ಪ್ರೇಯಾನ್-ಪ್ರಿಯನು, ತದಾ-ಆಗ, ಉಪೇಕ್ಷಿತಃ-ತಿರಸ್ಕರಿಸಲ್ಪಟ್ಟನು. ಕಂ-ಯಾವ, ಗುಣಂ-ಪ್ರಯೋಜನವನ್ನು, ಆಕಲಯ್ಯ ನಿರೀಕ್ಷಿಸಿ, ದಯಿತೇ-ಪತಿಯಲ್ಲಿ, ವಯಂ-ನಾವು, ಮಾನಂ-ಕೋಪವನ್ನು ಕೃತಾಃ-ಮಾಡಿದೆವು ?

ಎಲೌ ಗೆಳತಿಯರೇ, ನನ್ನ ಬಿಸಿಯುಸಿರು ಮುಖವನ್ನು ಸುಡು ತ್ತಿದೆ. ಮನಸ್ಸು ಕಾರಣವಿಲ್ಲದೆ ಕುದಿಯುತ್ತಿದೆ. ನಿದ್ರೆಯೇ ಬಾರದು. ನನ್ನ ಪ್ರಿಯನ ಮುಖವೇ ಕಾಣುತ್ತಿಲ್ಲ. ಹಗಲೆನ್ನದೆ ರಾತ್ರಿಯೆನ್ನದೆ ಅಳುತ್ತಿದ್ದೇನೆ. ನನ್ನ ದೇಹವೆಲ್ಲ ಕ್ಷೀಣಿಸುತ್ತಿದೆ. ಕಾಲಿಗೆ ಬಿದ್ದ ಪ್ರಿಯ ನನ್ನು ತಿರಸ್ಕರಿಸಿದೆ. ಯಾವ ಪ್ರಯೋಜನವನ್ನು ಬಯಸಿ ಇನಿಯನಲ್ಲಿ ಪ್ರಣಯಕೋಪವನ್ನು ಮಾಡಿದೆ ?

೬೭

ನಿರೀಕ್ಷಣೆ

**ಸ್ಫುಟತು ಹೃದಯಂ ಕಾಮಃ ಕಾಮಂ ಕರೋತು ತನುಂ ತನುಂ**
**ನ ಸಖಿ ಚಪಲಪ್ರೇಮ್ಣಾ ಕಾರ್ಯಂ ಪುನರ್ದಯಿತೇನ ಮೇ ।**
**ಇತಿ ಸರಭಸಂ ಮಾನಾವೇಶಾದುದೀರ್ಯ ವಚಸ್ತಯಾ**
**ರಮಣಪದವೀ ಸಾರಂಗಾಕ್ಷ್ಯಾ ನಿರಂತರಮೀಕ್ಷಿತಾ ॥**

ಸಖಿ-ಗೆಳತಿಯೇ, ಕಾಮಃ-ಮನ್ಮಥನು, ಕಾಮಂ-ಸ್ವೇಚ್ಛೆಯಾಗಿ ಹೃದಯಂ-ತನ್ನ ಹೃದಯವನ್ನು ಸ್ಫುಟತು-ಸೀಳಿಹಾಕಲಿ. ತನುಂ-ನನ್ನ ಶರೀರವನ್ನು, ತನುಂ-ಕ್ಷೀಣವನ್ನಾಗಿ, ಕರೋತು-ಮಾಡಲಿ ಪುನಃ-ಆದರೆ ಚಪಲಪ್ರೇಮ್ಣಾ-ಚಂಚಲವಾದ ಪ್ರೇಮವುಳ್ಳ, ಮೇ-ನನ್ನ ದಯಿ ತೇನ-ಪ್ರಿಯನಿಂದ, ಕಾರ್ಯಂ ಕಿಂ-ಕೆಲಸವೇನಾಗುವುದು ? ಇತಿ-ಹೀಗೆ,

ಸರಭಸಂ-ಗಡಿಬಿಡಿಯಾಗಿ, ಮಾನಾವೇಶಾತ್-ಕೋಪವಶದಿಂದ, ವಚಃ-ಕೆಲವು ಮಾತುಗಳನ್ನು, ಉದೀರ್ಯ-ಹೇಳಿ, ತಯಾಸಾರಂಗಾಕ್ಷ್ಯಾ-ಆ ಕುರಂಗಲೋಚನೆಯಾದ ಪ್ರಿಯೆಯಿಂದ, ರಮಣಪದವೀ-ಇನಿಯನು ಬರುವ ದಾರಿಯೇ, ಸರಂತರಂ-ಯಾವಾಗಲೂ, ಈಕ್ಷಿತಾ-ನೋಡಲ್ಪಟ್ಟಿತು.

ಗೆಳತಿಯೇ, ಮನ್ಮಥನು ತನ್ನಿಷ್ಟಬಂದಂತೆ ನನ್ನ ಹೃದಯವನ್ನು ಸೀಳಿಹಾಕಲಿ. ನನ್ನ ದೇಹ ಕ್ಷೀಣಿಸಿ ಹೋಗುವಂತೆ ತಪನೆಸಗಲಿ. ಚಂಚಲವಾದ ಪ್ರೇಮವುಳ್ಳ ನಲ್ಲಿಯನಿಂದ ನನಗೇನು ಪ್ರಯೋಜನ? ಹೀಗೆಂದು ಸಂಭ್ರಮದಲ್ಲಿ ನುಡಿದ ಆ ಕುರಂಗಾಕ್ಷಿ ಪ್ರಿಯನು ಬರುವ ದಾರಿಯನ್ನೇ ನೋಡುತ್ತಿದ್ದಳು.

೬೮

ಗೂಳಿ ಬಸವ

**ಇದಂ ಕೃಷ್ಣಂ ಕೃಷ್ಣಂ ಪ್ರಿಯತಮ ನನು ಶ್ವೇತಮಥ ಕಿಂ**
**ಗಮಿಷ್ಯಾಮೋ ಯಾಮೋ ಭವತು ಗಮನೇನಾಥ ಭವತು ।**
**ಪುರಾ ಯೇನೈವಂ ಮೇ ಚಿರಮನುಸೃತಾ ಚಿತ್ತಪದವೀ**
**ಸ ಏವಾನ್ಯೋ ಜಾತಃ ಸಖಿ ಪರಿಚಿತಾಃ ಕಸ್ಯಪುರುಷಾಃ ॥**

'ಇದಂ-ಇದು, ಕೃಷ್ಣಂ-ಕಪ್ಪು' 'ಪ್ರಿಯತಮ, ಶ್ವೇತಂನನು-ಬಿಳುಪಲ್ಲವೇ?' 'ಅಥ ಕಿಂ-ಅಲ್ಲದೆ ಏನು?' 'ಗಮಿಷ್ಯಾಮಃ-ಹೋಗೋಣವೇ?' 'ಯಾಮಃ ಹೋಗೋಣ' 'ಗಮನೇನ-ಪ್ರಯಾಣದಿಂದ, ಭವತು-ಸಾಕು' 'ಅಥ ಭವತು-ಹಾಗೆಯೇ ಆಗಲಿ.' ಏವಂ-ಈ ರೀತಿಯಲ್ಲಿ, ಪುರಾ-ಈ ಮುಂಚೆ, ಯೇನ-ಯಾವ ನಲ್ಲನಿಂದ, ಮೇ-ನನ್ನ, ಚಿತ್ತಪದವೀ-ಮನಸ್ಸಿನ ಮಾರ್ಗವು, ಚಿರಂ-ಬಹುಕಾಲ, ಅನುಸೃತಾ-ಅನುಸರಿಸಲ್ಪಟ್ಟಿತೋ, ಸ ಏವ-ಆ ನನ್ನ ಪ್ರಿಯತಮನೇ, ಸಖಿ-ಗೆಳತಿಯೇ, ಅನ್ಯಃ-ಬೇರೆಯವನಾಗಿ, ಜಾತಃ-ಆದನು. ಪುರುಷಾಃ-ಗಂಡಸರು, ಕಸ್ಯ-ಯಾರಿಗೆ ತಾನೆ, ಪರಿಚಿತಾಃ-ಸ್ನೇಹವುಳ್ಳವರಾಗಿರುವರು?

'ಇದು ಕಪ್ಪು' 'ಕಪ್ಪು' 'ಪ್ರಿಯತಮ' 'ಇದು ಬಿಳುಪಲ್ಲವೇ?' 'ಅಲ್ಲದೆ ಏನು?' 'ಹೋಗೋಣವೇ?' 'ಹೋಗೋಣ', ನಡೆದುದು

ನಾಕು ' - ಹಾಗೇ ಆಗಲಿ ' ಹೀಗೆ ಈ ರೀತಿಯಾಗಿ ಈ ಮುಂಚೆ ನನ್ನ ಮನಸ್ಸನ್ನು ಅನುಸರಿಸುತ್ತಿದ್ದ ಪ್ರಿಯತಮನು ಈಗ ಬೇರೆಯವನಾಗಿದ್ದಾನೆ. ಸಖಿ, ಪುರುಷರು ಯಾರಲ್ಲಿ ತಾನೆ ಬಹುಕಾಲ ಸ್ನೇಹವನ್ನಿಡುವರು ?

೬೯

ಹತಾಶೆ

**ಗತೇ ಪ್ರೇಮಾಬಂಧೇ ಪ್ರಣಯಬಹುಮಾನೇ ವಿಗಲಿತೇ**
**ನಿವೃತ್ತೇ ಸದ್ಭಾವೇ ಜನ ಇವ ಜನೇ ಗಚ್ಛತಿ ಪುರಃ ।**
**ತದುತ್ಪ್ರೇಕ್ಷ್ಯೋತ್ಪ್ರೇಕ್ಷ್ಯ ಪ್ರಿಯಸಖಿ ಗತಾಂಸ್ತಾಂಶ್ಚ ದಿವಸಾ**
**ನ್ನ ಜಾನೇ ಕೋ ಹೇತುರ್ದಲತಿ ಶತಧಾ ಯನ್ನ ಹೃದಯಂ ॥**

ಹೇ ಪ್ರಿಯಸಖಿ-ಎಲೌ ಮೆಚ್ಚಿನ ಗೆಳತಿಯೆ, ಪ್ರೇಮಾಬಂಧೇ-ಪ್ರೀತಿಯ ಸಂಪರ್ಕವು, ಗತೇ-ಕಳೆದು ಹೋಗಲು, ಪ್ರಣಯ ಬಹುಮಾನೇ-ಪ್ರಣಯದಿಂದ ಹುಟ್ಟುವ ಕೋಪವು, ವಿಗಲಿತೇ-ವ್ಯರ್ಥವಾಗಲು, ಸದ್ಭಾವೇ-ಪ್ರೇಮಭಾವನೆ, ನಿವೃತ್ತೇ-ಹೊರಟು ಹೋಗಲು, ಜನೇ-ಅನುರಾಗಿಯಾಗಿದ್ದ ಇನಿಯನು, ಜನ ಇವ-ಉದಾಸೀನ ಮನುಷ್ಯನಂತೆ, ಪುರಃ-ಮುಂದೆ ಮುಂದೆ ಹೊರಟು ಹೋಗಲು, ಗತಾನ್-ಹಾಗೆಯೇ ಕಳೆದು ಹೋದ, ದಿವಸಾನ್-ದಿನಗಳನ್ನೂ, ತತ್ ಉತ್ಪ್ರೇಕ್ಷ್ಯ ಉತ್ಪ್ರೇಕ್ಷ್ಯ-ಹಿಂದಿನ ಪ್ರಣಯಭಾವವನ್ನೂ ಊಹಿಸಿ ಊಹಿಸಿ, ಯತ್-ಯಾವ ಕಾರಣದಿಂದ, ಹೃದಯಂ-ನನ್ನ ಹೃದಯವು, ಶತಧಾ-ಅನೇಕ ಚೂರುಗಳಾಗಿ, ನ ದಲತಿ-ಬಿರಿದು ಹೋಗುವುದಿಲ್ಲವೋ, ಕಃ ಹೇತುಃ-ಅದಕ್ಕೆ ಕಾರಣವೇನು ? ನ ಜಾನೇ-ತಿಳಿಯಲಾರೆ.

ಎಲೆ ಪ್ರಿಯಸಖಿ, ನಮ್ಮನ್ನು ಬಂಧಿಸಿದ ಪ್ರೇಮದ ಕಟ್ಟು ಕಳಚಿತು. ಪ್ರಣಯಗೌರವ ಇಳಿಮುಖವಾಯಿತು. ಪ್ರೇಮದ ಭಾವ ಮರೆಯಾಯಿತು. ನನ್ನ ಇನಿಯನು ನನ್ನಲ್ಲಿ ಉದಾಸೀನ ಮನುಷ್ಯನಂತೆ ನಡೆಮುಕೊಳ್ಳತೊಡಗಿದನು. ಇದನ್ನು ನೋಡಿ ನೋಡಿ, ಪ್ರೇಮದ ಸವಿಯನ್ನು ಸವಿದ ದಿನಗಳನ್ನು ನೆನೆದು ನನ್ನ ಹೃದಯ ನೂರು ಸೀಳಾಗಿ ಏಕೆ ಬಿರಿದು ಹೋಗುವುದಿಲ್ಲವೋ ನಾನು ಕಾಣೆ.

೭೦

ಮೋಸ

**ಕಾಂತೇ ಸಾಗಸಿ ಶಾಪಿತೇ ಪ್ರಿಯಸಖೀವೇಷಂ ವಿಧಾಯಾಗತೇ**
**ಭ್ರಾಂತ್ಯಾಲಿಂಗ್ಯ ಮಯಾ ರಹಸ್ಯಮುದಿತಂ ತತ್ಸಂಗಮಾ**
**ಕಾಂಕ್ಷಯಾ**
**ಮುಗ್ಧೇ ದುಷ್ಕರಮೇತದಿತ್ಯತಿತಮಾಮುದ್ದಾಮಹಾಸಂ ಬಲಾ**
**ದಾಶ್ಲಿಷ್ಯ ಛಲಿತಾಸ್ಮಿ ತೇನ ಕಿತವೇನಾದ್ಯ ಪ್ರದೋಷಾಗಮೇ ||**

ಸಾಗಸಿ-ಅಪರಾಧಿಯಾಗಿದ್ದ, ಕಾಂತೇ-ಪ್ರಿಯನು, ಶಾಪಿತೇ-ಶಪಥದಿಂದ ದೂರೀಕರಿಸಲ್ಪಡಲು, ಪ್ರಿಯಸಖೀ ವೇಷಂ-ಪ್ರಿಯಳಾದ ಗೆಳತಿಯ ವೇಷವನ್ನು, ವಿಧಾಯ-ಹೊಂದಿ, ಆಗತೇ-ಬರಲಾಗಿ, ಭ್ರಾಂತ್ಯಾ-ನಿಜವಾದ ಗೆಳತಿಯೆಂಬ ಅಜ್ಞಾನದಿಂದ, ಮಯಾ-ನನ್ನಿಂದ, ಆಲಿಂಗ್ಯ-ಆಲಿಂಗಿಸಿಕೊಂಡು, ತತ್ಸಂಗಮಾಕಾಂಕ್ಷಯಾ-ಅದೇ ಪ್ರಿಯನನ್ನೇ ಮತ್ತೆ ಪಡೆಯುವ ಆಸೆಯಿಂದ, ರಹಸ್ಯಂ-ಅನೇಕ ಗುಟ್ಟಾದ ಮಾತುಗಳು, ಉದಿತಂ-ಹೇಳಲ್ಪಟ್ಟಿತು. (ಅನಂತರ) ಮುಗ್ಧೇ-ಏನೂ ಅರಿಯದವಳೇ, ಏತತ್-ನೀನು ಹೇಳುವ ಪ್ರಿಯಸಮಾಗಮ ಕಾರ್ಯ, ದುಷ್ಕರಂ-ಸಾಧ್ಯವಿಲ್ಲದ್ದು, ಇತಿ-ಹೀಗೆನ್ನುತ್ತ, ಅತಿತಮಾಂ-ಅತ್ಯಂತವಾದ, ಉದ್ದಾಮಹಾಸಂ-ಶ್ರೇಷ್ಠವಾದ (ಉಚಿತವಾದ)ನಗುವಿಕೆಯಿಂದ, ಬಲಾತ್-ಗಟ್ಟಿಯಾಗಿ, ಆಶ್ಲಿಷ್ಯ-ಅಪ್ಪಿಕೊಂಡು, ಅದ್ಯ-ಈ ದಿನದ, ಪ್ರದೋಷಾಗಮೇ-ಸಂಜೆಯ ಸಮಯದಲ್ಲಿ, ತೇನ-ಆ, ಕಿತವೇನ-ಮೋಸಗಾರನಿಂದ, ಛಲಿತಾ ಅಸ್ಮಿ-ಮೋಸ ಹೋಗಲ್ಪಟ್ಟೆನು.

ಅಪರಾಧಿಯಾಗಿದ್ದ ನನ್ನ ಇನಿಯನನ್ನು ಆಣೆಯಿಟ್ಟು ನನ್ನಿಂದ ದೂರಮಾಡಿದೆನು: ಆವನಾದರೋ ಗೆಳತಿಯ ವೇಷದಿಂದ ನನ್ನಲ್ಲಿಗೆ ಬರಲು, ಅವನನ್ನು ನನ್ನ ಸಖಿಯೆಂಬ ಅಜ್ಞಾನದಿಂದ ಅಪ್ಪಿ ಪ್ರಿಯನನ್ನು ಪಡೆಯುವ ಆಸೆಯಿಂದ ಅವನಲ್ಲಿ ಅನೇಕತೆರನಾದ ಗುಟ್ಟು ಮಾತುಗಳನ್ನಾಡಿದನು. ಆ ಬಳಿಕ ಅವನು 'ಎಲೆ ಮುಗ್ಧೇ, ನೀನು ನುಡಿಯುತ್ತಿರುವ ಪ್ರಿಯಸಮಾಗಮ ಕಾರ್ಯಸಾಧ್ಯವಿಲ್ಲದ್ದು' ಎಂದು ಉಚಿತವಾದ ನಗುವಿನಿಂದ ನನ್ನನ್ನು ಬಿಗಿಯಾಗಿ ಅಪ್ಪಿದನು. ಈ ದಿನ ಸಂಜೆ ಆ ಮೋಸಗಾರನಿಂದ ನಾನು ಮೋಸಹೋದೆ.

೭೧

ಅನುರಾಗ ನನ್ನನ್ನು ದಹಿಸುತ್ತಿದೆ

**ಆಸ್ತಾಂ ವಿಶ್ವಸನಂ ಸಖೀಷು ವಿದಿತಾಭಿಪ್ರಾಯಸಾರೇ ಜನೇ
ತತ್ರಾಪ್ಯರ್ಪಯಿತುಂ ದೃಶಂ ಸುರಚಿತಾಂ ಶಕ್ನೋಮಿ ನ
ವ್ರೀಡಯಾ ।
ಲೋಕೋಽಪ್ಯೇಷ ಪರೋಪಹಾಸಚತುರಃ ಸೂಕ್ಷ್ಮೇಂಗಿತ
ಜ್ಞೋಽಪ್ಯಲಂ
ಮಾತಃ ಕಂ ಶರಣಂ ವ್ರಜಾಮಿ ಹೃದಯೇ ಜೀರ್ಣೋಽ
ನುರಾಗಾನಲಃ ॥**

ಸಖೀಷು-ಗೆಳತಿಯರಲ್ಲಿ, ವಿಶ್ವಸನಂ-ನಂಬುಗೆಯಿಡುವುದು, ಆಸ್ತಾಂ-ಇರಲಿ. ಜನೇ-ಪ್ರಿಯನಾದವನು, ವಿದಿತ-ತಿಳಿಯಲ್ಪಟ್ಟ, ಅಭಿಪ್ರಾಯಸಾರೇ-ಸಿಜವಾದ ಮನೋಭಾವನೆಯುಳ್ಳವನಾಗಿರುವಾಗ, ತತ್ರಾಪಿ-ಆ ನನು ಯ ದ ಲ್ಲಿ ಯೂ, ಸುರಚಿತಾಂ-ಅರ್ಥಗರ್ಭಿತವಾದ, ದೃಶಂ-ದೃಷ್ಟಿಯನ್ನು, ಅರ್ಪಯಿತುಂ-ಇಡುವುದಕ್ಕೂ, ವ್ರೀಡಯಾ-ನಾಚಿಕೆಯಿಂದ, ನ ಶಕ್ನೋಮಿ-ಸಮರ್ಥಳಾಗಲಾರೆನು. ಏಷಃ-ಈ, ಲೋಕಃ ಅಪಿ-(ಪ್ರಪಂಚವಾದರೋ) ಉದ್ದೇಶ ಮಾಡಿಕೊಂಡಿರುವ ಮನುಜನಾದರೋ, ಸೂಕ್ಷ್ಮ-ಸ್ವಲ್ಪ ಕಾಣುವ, ಇಂಗಿತಜ್ಞಃ ಅಪಿ-ಮನೋಭಿಪ್ರಾಯವನ್ನು ತಿಳಿಯುವವನಾದರೂ, ಪರೋಪಹಾಸ-ಮತ್ತೊಬ್ಬರನ್ನು ಹಾಸ್ಯಮಾಡುವುದರಲ್ಲಿ, ಚತುರಃ-ಸಮರ್ಥನು. ಮಾತಃ-ಅಮ್ಮಾ, ಅಲಂ-ಸಾಕು ಕಂ-ಯಾರನ್ನು, ಶರಣಂ-ರಕ್ಷಕನನ್ನಾಗಿ, ವ್ರಜಾಮಿ-ಹೊಂದಲಿ. ಅನುರಾಗಾನಲಃ-ಪ್ರೇಮವೆಂಬ ಅಗ್ನಿ, ಹೃದಯೇ-ನನ್ನ ಮನಸ್ಸಿನಲ್ಲಿಯೇ, ಜೀರ್ಣಃ-ಆರಿಹೋಗುತ್ತಿದೆ.

ಗೆಳತಿಯರಲ್ಲಿ ನಂಬುಗೆಯನ್ನಿಡುವ ಮಾತು ಹಾಗಿರಲಿ. ನನ್ನ ಇನಿಯನಿಗೆ ನನ್ನ ಮನೋಭಿಪ್ರಾಯ ತಿಳಿದಿರುವ ಸಮಯದಲ್ಲಿ ನಾಚಿಕೆಯಿಂದ ಅರ್ಥಗರ್ಭಿತವಾದ ನೋಟವನ್ನು ಬೀರುವುದಕ್ಕೂ ನಾನು ಸಮರ್ಥಳಾಗಲಾರೆ. ನನ್ನ ಪ್ರೀತಿಗೆ ಪಾತ್ರನಾದವನಾದರೋ ಇಂಗಿ

ತಜ್ಞ. ಇತರರನ್ನು ಹಾಸ್ಯಮಾಡುವುದರಲ್ಲಿ ಬಹು ಚತುರ. ಅಮ್ಮ, ಸಾಕು. ಈ ನಾನು ಯಾರನ್ನು ಮರೆಹೋಗಲಿ. ಅನುರಾಗವೆಂಬ ಅಗ್ನಿ ನನ್ನ ಹೃದಯದಲ್ಲೇ ಜೀರ್ಣವಾಗುತ್ತಿದೆಯಲ್ಲ!

೭೨

ಪ್ರವಾಸ ನಿರೋಧ

**ಚಿಂತಾಮೋಹವಿನಿಶ್ಚಲೇನ ಮನಸಾ ಮೌನೇನ ಪಾದಾನತಃ**
**ಪ್ರತ್ಯಾಖ್ಯಾನಪರಾಙ್ಮುಖಃ ಪ್ರಿಯತಮೋ ಗಂತುಂ**
**ಪ್ರವೃತ್ತೋಽಧುನಾ ।**
**ಸವ್ರೀಡೈರಲಸೈರ್ನಿರಂತರ ಲುಠದ್ಬಾಷ್ಪಾಕುಲೈರೀಕ್ಷಣೈಃ**
**ಶ್ವಾಸೋತ್ಕಂಪಿಕುಚಂ ನಿರೀಕ್ಷ್ಯ ಸುಚಿರಂ ಜೀವಾಶಯಾ**
**ವಾರಿತಃ ॥**

ಚಿಂತಾ-ಯೋಚನೆಯಿಂದಲೂ, ಮೋಹ–ಅಂತಃಕರಣಪೂರ್ವಕವಾದ ಪ್ರೇಮದಿಂದಲೂ, ವಿನಿಶ್ಚಲೇನ-ಸ್ಥಿರವಾದ, ಮನಸಾ-ಮನಸ್ಸಿನಿಂದ, ಮೌನೇನ–ಮಾತನಾಡದೆ, ಪಾದಾನತಃ-ಪ್ರಿಯೆಯ ಕಾಲಿಗೆ ನಮಸ್ಕರಿಸಿದ, ಪ್ರತ್ಯಾಖ್ಯಾನಪರಾಙ್ಮುಖಃ–(ಮತ್ತು) ಪ್ರಿಯೆಯ ತಿರಸ್ಕಾರದಿಂದ ಹಿಂದಿರುಗಿದ, ಪ್ರಿಯತಮಃ-ಪ್ರಿಯತಮನು, ಅಧುನಾ-ಈಗ, ಗಂತುಂ-ಪರಸ್ಥಳಕ್ಕೆ ಹೋಗಲು, ಪ್ರವೃತ್ತಃ-ತೊಡಗಿದನು. ಸವ್ರೀಡೈಃ–ನಾಚಿಕೆಯಿಂದ ಕೂಡಿದ, ಅಲಸೈಃ-ಮಂದವಾದ, ನಿರಂತರ-ಯಾವಾಗಲೂ, ಲುಠತ್-ಉರುಳುತ್ತಿರುವ, ಬಾಷ್ಪ–ಕಣ್ಣೀರಿನಿಂದ, ಆಕುಲೈಃ–ತುಂಬಿದ, ಈಕ್ಷಣೈಃ-ದೃಷ್ಟಿಗಳಿಂದ, ಶ್ವಾಸ-ಏದುಸಿರಿನಿಂದ, ಉತ್ಕಂಪಿ-ನಡುಗುವ,ಕುಚಂ-ಸ್ತನಗಳುಳ್ಳ ರೀತಿಯಲ್ಲಿ, ಸುಚಿರಂ-ಬಹಳ ಹೊತ್ತು, ನಿರೀಕ್ಷ್ಯ-(ಪ್ರಿಯನನ್ನು) ನೋಡಿ, ಜೀವಾಶಯಾ-ಬದುಕುವ ಆಸೆಯಿಂದ, ವಾರಿತಃ-ತಡೆಯಲ್ಪಟ್ಟನು.

ಚಿಂತೆಯಿಂದಲೂ ಇನಿಯನಲ್ಲಿದ್ದ ಪ್ರೇಮದಿಂದಲೂ ಮನಸ್ಸನ್ನು ಗಟ್ಟಿಮಾಡಿ ಮಾತನಾಡದೆ, ತನ್ನ ಕಾಲಿಗೆರಗಿದ ಇನಿಯನನ್ನು ಪ್ರಿಯೆ ತಿರಸ್ಕರಿಸಿದಳು. ತನ್ನ ಇನಿಯಳಿಂದ ತಿರಸ್ಕೃತನಾದ ಪ್ರಿಯತಮನು ಪರ

ಸ್ಥಳಕ್ಕೆ ಹೊರಡಲು ತೊಡಗಿದನು. ಆಗ ಅವಳು ನಾಚಿಕೆಯಿಂದಲೂ ಸಿಡಾನವಾಗಿ ಸಂತತವಾಗಿ ಉರುಳುತ್ತಿರುವ ಕಣ್ಣೀರಿನಿಂದಲೂ ತುಂಬಿದ ನೋಟದಿಂದಲೂ ಬಹಳ ಹೊತ್ತು ನೋಡಿ ನಿಟ್ಟುಸಿರಿಟ್ಟು ಬದುಕುವ ಆಶೆಯನ್ನು ನೀಗಲು, ಅವನು ತನ್ನ ಪ್ರಯಾಣವನ್ನು ನಿಲ್ಲಿಸಿದನು.

೭೩

ಪ್ರವಾಸ ನಿರೋಧ

**ಪ್ರಹರವಿರತೌ ಮಧ್ಯೇ ವಾಹ್ನಸ್ತತೋಽಪಿ ಪರೇಣ ವಾ**
**ಕಿಮುತ ಸಕಲೇ ಯಾತೇ ವಾಹ್ನಿಪ್ರಿಯ ತ್ವಮಿಹೈಷ್ಯಸಿ**
**ಇತಿ ದಿನಶತಪ್ರಾಪ್ಯಂ ದೇಶಂ ಪ್ರಿಯಸ್ಯ ಯಿಯಾಸತೋ**
**ಹರತಿ ಗಮನಂ ಬಾಲಾಲಾಪೈಃ ಸಬಾಷ್ಪಗಲಜ್ಜಲೈಃ ||**

ಪ್ರಿಯ-ಇನಿಯನೇ, ತ್ವಂ-ನೀನು, ಪ್ರಹರವಿರತೌ-ಮೊದಲನೆಯ ಜಾವದ ಕೊನೆಯಲ್ಲಿ, (ಅಥವಾ) ಮಧ್ಯೇ-ಯಾಮದ ಮಧ್ಯದಲ್ಲಿ, ವಾ-ಅಥವಾ, ಅಹ್ನಃ-ಹಗಲಿನ, ತತೋಽಪಿ ಮುಂದಿನ ಯಾವದಲ್ಲಿ, ವಾ-ಅಥವಾ, ಪರೇಣ-ಅದರ ಮುಂದಿನ ಯಾಮದಲ್ಲಿ, ಕಿಮುತ-ಅಥವಾ, ಅಹ್ನಿ-ಹಗಲು, ಸಕಲೇಯಾತೇ-ಸಂಪೂರ್ಣವಾಗಿ ಕಳೆದ ಮೇಲಾದರೂ, ಇಹ-ಇಲ್ಲಿಗೆ, ಏಷ್ಯಸಿ-ಬರುವೆಯಾ? ಇತಿ-ಹೀಗೆ, ದಿನಶತ ಪ್ರಾಪ್ಯಂ-ಅನೇಕ ದಿನಗಳ ಪ್ರಯಾಣದಿಂದ ಹೊಂದಲು ಸಾಧ್ಯವಾದ, ದೇಶಂ-ದೇಶವನ್ನು (ಕುರಿತು), ಯಿಯಾಸತಃ-ಪ್ರಯಾಣ ಮಾಡಲು ಯತ್ನಿಸುತ್ತಿರುವ, ಪ್ರಿಯಸ್ಯ-ಪ್ರಿಯನ, ಗಮನಂ-ಪ್ರಯಾಣವನ್ನು, ಸಬಾಷ್ಪಗಲಜ್ಜಲೈಃ-ಕಣ್ಣೀರಿನಿಂದ ತುಂಬಿ ಹರಿಯುತ್ತಿರುವ, ಬಾಲಾ ಲಾಪೈಃ-ಬಾಲಭಾಷೆಯ ಮಾತುಗಳಿಂದ, ಹರತಿ-ತಡೆಯುತ್ತಾಳೆ.

'ನಲ್ಲನೇ, ದೇಶಾಂತರಕ್ಕೆ ಪ್ರಯಾಣ ಹೊರಟಿರುವ ನೀನು ನಾಳೆಯೇ ಹಗಲಿನ ಮೊದಲ ಯಾಮದಲ್ಲಿ ಬರುವೆಯಾ? ಅಥವಾ ಮುಂದಿನ ಯಾಮದ ಮೊದಲಲ್ಲಿ ಅಥವಾ ಆ ಯಾಮದ ಕೊನೆಯಲ್ಲಿ ಬರಬೇಕು. ಕೊನೆಯದಾಗಿ ನಾಳೆ ಹಗಲು ಮುಗಿದು ರಾತ್ರಿಯಾಗುವುದರೊಳಗಾಗಿ ಹಿಂದಿರುಗಲೇಬೇಕು.' ಎಂದು ಅನೇಕ ದಿನಗಳ ಪ್ರಯಾಣ

ದಿಂದ ಸೇರಬೇಕಾಗಿದ್ದ ದೂರದೇಶವನ್ನು ಕುರಿತು ಹೊರಟಿದ್ದ ಪ್ರಿಯನ ಪ್ರಯಾಣವನ್ನು, ನೀರು ತುಂಬಿ ಹರಿಯುತ್ತಿರುವ ನೋಟದಿಂದಲೂ, ಮೃದುನುಡಿಗಳಿಂದಲೂ ತಡೆದಳು.

೭೪

ಕಣ್ಣೀರಿನ ತಡೆ

**ಲಗ್ನಾ ನಾಂಶುಕಪಲ್ಲವೇ ಭುಜಲತಾ ನ ದ್ವಾರದೇಶೇಽರ್ಪಿತಾ**
**ನೋ ವಾ ಪಾದಯುಗೇ ಸ್ವಯಂ ನಿಪತಿತಂ ತಿಷ್ಠೇತಿ ನೋಕ್ತಂ ವಚಃ ।**
**ಕಾಲೇ ಕೇವಲಮಂಬುದಾಲಿಮಲಿನೇ ಗಂತುಂ ಪ್ರವೃತ್ತಃ ಶಠ**
**ಸ್ತನ್ವ್ಯಾ ಬಾಷ್ಪಜಲೌಘಕಲ್ಪಿತನದೀಪೂರೇಣ ರುದ್ಧಃ ಪ್ರಿಯಃ॥**

ಅಂಬುದ-ಮೇಘಗಳ, ಆಲಿ-ಸಮೂಹದಿಂದ, ಮಲಿನೇ-ಕತ್ತಲಾಗಿರುವ, ಕಾಲೇ-ಸಮಯದಲ್ಲಿ, ಕೇವಲಂ-ಮುಖ್ಯವಾಗಿ, ಶಠಃ ಒರಟನಾದ ಪ್ರಿಯನು, ಗಂತುಂ-ದೇಶಾಂತರಕ್ಕೆ ಹೋಗಲು, ಪ್ರವೃತ್ತಃ-ತೊಡಗಿದನು. ಅಂಶುಕಪಲ್ಲವೇ-ಬಟ್ಟೆಯ ಸೆರಗುಗಳನ್ನು, ನ ಲಗ್ನಾ-ಹಿಡಿದೆಳೆಯಲಿಲ್ಲ. ದ್ವಾರದೇಶೇ-ಹೊರಬಾಗಿಲಿನಲ್ಲಿ, ಭುಜಲತಾ-ಲತೆಯಂತಿರುವ ಬಾಹು, ನ ಅರ್ಪಿತಾ-ಇಡಲ್ಪಡಲಿಲ್ಲ, ವಾ-ಅಥವಾ, ಪಾದಯುಗೇ-ಎರಡುಪಾದಗಳಲ್ಲಿಯೂ, ಸ್ವಯಂ-ತಾನು, ನೋ ನಿಪತಿತಂ-ಬೀಳಲ್ಪಡಲಿಲ್ಲ. ತಿಷ್ಠ-ನಿಲ್ಲು, ಇತಿ-ಹೀಗೆಂಬ, ವಚಃ-ಮಾತು, ನ ಉಕ್ತಂ-ಹೇಳಲ್ಪಡಲಿಲ್ಲ. ತನ್ವ್ಯಾಃ-ಕೃಶಾಂಗಿಯ, ಬಾಷ್ಪಜಲ-ಕಣ್ಣೀರಿನ, ಓಘ-ಸಮೂಹದಿಂದ, ಕಲ್ಪಿತ-ಕಲ್ಪಿಸಲ್ಪಟ್ಟ, ನದೀಪೂರೇಣ-ನದಿಯ ಪ್ರವಾಹದಿಂದ, ಪ್ರಿಯಃ-ಪ್ರಿಯನು, ರುದ್ಧಃ-ತಡೆಯಲ್ಪಟ್ಟನು.

ಮೋಡ ಮುಚ್ಚಿದ ಸಮಯದಲ್ಲಿ ಶಠನಾದ ಪ್ರಿಯನು ಪರದೇಶವನ್ನು ಕುರಿತು ಹೊರಡಲು ಸಿದ್ಧನಾದನು. ಅವನ ಪ್ರಿಯೆ ಆಗ ಅವನ ಬಟ್ಟೆಯ ಸೆರಗನ್ನು ಹಿಡಿದು ನಿಲ್ಲಿಸಲಿಲ್ಲ. ಬಾಗಿಲಿಗೆ ತನ್ನ ತೋಳನ್ನು ಅಡ್ಡಗಟ್ಟಿ ಅವನನ್ನು ತಡೆಯಲಿಲ್ಲ. ಕಾಲಿಗೆರಗಿ ಪ್ರಿಯನ ಪ್ರಯಾಣವನ್ನು ಅಡ್ಡಿಪಡಿಸಲಿಲ್ಲ. ನಿಲ್ಲೆಂದು ನುಡಿಯಲಿಲ್ಲ. ಆ ಕೃಶಾಂಗಿ

ತನ್ನ ಕಣ್ಣೀನ ಪ್ರವಾಹವೆಂಬ ನದಿಯನ್ನು ಕಲ್ಪಿಸಿ ಪ್ರಿಯನ ಪ್ರಯಾಣ ವನ್ನು ತಡೆದಳು.

೭೫

ಭಾವಿಮರಣದ ಸೂಚನೆ

**ಯಾತಾಃ ಕಿಂ ನ ಮಿಲಂತಿ ಸುಂದರಿ ಪುನಶ್ಚಿಂತಾ ತ್ವಯಾ ಮತ್ಕೃತೇ**
**ನೋ ಕಾರ್ಯಾನಿತರಾಂ ಕೃಶಾಸಿ ಕಥಯತ್ಯೇವಂ ಸಬಾಷ್ಪೇ ಮಯಿ ।**
**ಲಜ್ಜಾಮಂಥರತಾರಕೇಣ ನಿಪತತ್ಪೀತಾಶ್ರುಣಾ ಚಕ್ಷುಷಾ**
**ದೃಷ್ಟ್ವಾ ಮಾಂ ಹಸಿತೇನ ಭಾವಿಮರಣೋತ್ಸಾಹಸ್ತಯಾ ಸೂಚಿತಃ ॥**

ಸುಂದರಿ-ಎಲೌ ಲಕ್ಷಣವತಿಯೆ, ಯಾತಾಃ-ದೂರ ದೇಶಕ್ಕೆ ಪ್ರಯಾಣ ಮಾಡಿದವರು, ಪುನಃ-ಮತ್ತೆ, ನ ಮಿಲಂತಿ ಕಿಂ-ಹಿಂದಿರುಗಿ ಬರುವುದಿಲ್ಲವೇನು ? ಮತ್ಕೃತೇ-(ಪ್ರಯಾಣಮಾಡಲಿರುವ) ನನಗಾಗಿ, ಚಿಂತಾ-ಯೋಚನೆಯು, ತ್ವಯಾ-ನಿನ್ನಿಂದ, ನೋ ಕಾರ್ಯಾ-ಮಾಡಲ್ಪಡತಕ್ಕುದಲ್ಲ. ನಿತರಾಂ-ಬಹಳವಾಗಿ, ಕೃಶಾಸಿ-ಕೃಶಳಾಗಿದ್ದೀಯೆ. ಏವಂ-ಈ ರೀತಿ, ಮಯಿ-ನಾನು, ಸಬಾಷ್ಪೇ-ಕಣ್ಣೀರಿನಿಂದ ಕೂಡಿ, ಕಥಯತಿ-ಹೇಳಲಾಗಿ, ಲಜ್ಜಾಮಂಥರತಾರಕೇಣ-ನಾಚಿಕೆಯಿಂದ ಮಂದವಾದ ಕಟಾಕ್ಷವುಳ್ಳ, ನಿಪತತ್ಪೀತಾಶ್ರುಣಾ-ಬೀಳುವುದನ್ನು ತಡೆಗಟ್ಟಿದ ಕಣ್ಣೀರುಳ್ಳ, ಹಸಿತೇನ-ವಿಶಾಲವಾದ, ಚಕ್ಷುಷಾ-ಕಣ್ಣಿನಿಂದ, ಮಾಂ-ನನ್ನನ್ನು, ದೃಷ್ಟ್ವಾ-ನೋಡಿ, ತಯಾ-ಅವಳಿಂದ (ವಿರಹವ್ಯಥೆಯನ್ನು ಸೂಚಿಸುವ ನಲ್ಲೆಯಿಂದ) ಭಾವಿಮರಣೋತ್ಸಾಹಃ-ನಿಜವಾಗಿ ಮುಂದೆ ನಡೆಸುವ ಮರಣದ ಸೂಚನೆಯು, ಸೂಚಿತಃ-ತೋರಿಸಲ್ಪಟ್ಟಿತು.

‘ ಎಲೆ ಚೆಲುವೆ, ದೂರ ದೇಶಕ್ಕೆ ಪ್ರಯಾಣ ಮಾಡಿದವರು ಹಿಂದಿರುಗಿ ಬರುವುದಿಲ್ಲವೇನು ? ನನಗಾಗಿ ಬಹುವಾಗಿ ಚಿಂತಿಸಿ ಕೃಶಳಾಗಿರುವೆಯಲ್ಲ ’ ಎಂದು ನಾನು ಕಣ್ಣೀರಿನಿಂದ ಕೂಡಿದ ಪ್ರಿಯೆಯನ್ನು

ನುಡಿಸಲಾಗಿ, ಅವಳು ನಾಚಿಕೆಯಿಂದ ಮಂದವಾದ ಕಡೆಗಣ್ಣಿನ ನೋಟ ವುಳ್ಳವಳಾಗಿ, ತಡೆಗಟ್ಟಿದ ಕಣ್ಣೀರನ್ನು ಸುರಿಸುವ, ಬೊಗಸೆ ಕಣ್ಣುಗಳಿಂದ ನನ್ನನ್ನು ನೋಡಿ, ಮುಂದೆ ತಾನು ನಡೆಸಲಿರುವ ಮರಣದ ಉತ್ಸಾಹ ವನ್ನು ತೋರಿಸಿದಳು.

೭೬

ಉಚಿತ ಕಾರ್ಯಾಚರಣೆ

**ಲೋಲೈರ್ಲೋಚನವಾರಿಭಿಃ ಸಶಪಥೈಃ ಪಾದಪ್ರಣಾಮೈಃ ಪ್ರಿಯೈ**
**ರನ್ಯಾಸ್ತಾ ವಿನಿವಾರಯಂತಿ ಕೃಪಣಾಃ ಪ್ರಾಣೇಶ್ವರಂ ಪ್ರಸ್ಥಿತಂ ।**
**ಪುಣ್ಯಾಹಂ ವ್ರಜ ಮಂಗಳಂ ಸುದಿವಸಃ ಪ್ರಾತಃ ಪ್ರಯಾತಸ್ಯ ತೇ**
**ಯತ್ಸ್ನೇಹೋಚಿತಮೀಹಿತಂ ಪ್ರಿಯ ಮಯಾ ತನ್ನಿರ್ಗತಃ ಶ್ರೋಷ್ಯಸಿ ॥**

ಕೃಪಣಾಃ-ಪ್ರಾಣದ ಮೇಲೆ ಆಸೆಯುಳ್ಳ, ಅನ್ಯಾಃ-ಬೇರೆಯುವ ರಾದ, ತಾಃ-ಆ ಸ್ತ್ರೀಯರು, ಪ್ರಸ್ಥಿತಂ-ಪ್ರಯಾಣಾರ್ಥವಾಗಿ ಹೊರಟ, ಪ್ರಾಣೇಶ್ವರಂ-ಪ್ರಾಣಪ್ರಿಯನನ್ನು, ಲೋಲೈಃ-ಚಂಚಲಗಳಾದ, ಲೋಚನ ವಾರಿಭಿಃ-ಕಣ್ಣೀರುಗಳಿಂದಲೂ, ಸಶಪಥೈಃ-ಅನೇಕ ಆಣೆ ಭಾಷೆಗಳಿಂ ದಲೂ, ಪ್ರಿಯೈಃ-ಹಿತಕರಗಳಾದ ಮಾತುಗಳಿಂದಲೂ, ವಿನಿವಾರಯಂತಿ-ತಡೆಯುತ್ತಾರೆ. ಹೇ ಪ್ರಿಯ-ಎಲೈ ಪತಿಯೇ, ಪ್ರಾತಃ-ಬೆಳಗಿನವೇಳೆ, ಪ್ರಯಾತಸ್ಯ-ಪ್ರಯಾಣಕ್ಕೆ ತೊಡಗಿರುವ ತೇ-ನಿನಗೆ, ಸುದಿವಸಃ-ಇದು ಒಳ್ಳೆಯ ದಿನ, ಪುಣ್ಯಾಹಂ-ಪವಿತ್ರವಾದ, ಮಂಗಳಂ-ಕಲ್ಯಾಣವು (ಉಂಟಾಗಲಿ), ವ್ರಜ-ಹೊರಡು. ಯತ್-ಯಾವುದು, ಮಯಾ-ನನ್ನಿಂದ, ಸ್ನೇಹೋಚಿತಂ-ಉಚಿತವಾದ ಪ್ರೇಮವೆಂದು, ಈಹಿತಂ-ನಿಶ್ಚಯ ಮಾಡ ಲ್ಪಟ್ಟಿರುವುದೋ, ತತ್-ಅದನ್ನು, ನಿರ್ಗತಃ ಪ್ರಯಾಣಮಾಡುತ್ತಿರುವ ನೀನು, ಶ್ರೋಷ್ಯಸಿ-ಕೇಳುವೆ.

ತಮ್ಮ ಪ್ರಾಣದ ಮೇಲೆ ಆಸೆಯುಳ್ಳ ಇತರ ಹೆಂಗಸರು ಪ್ರಯಾಣ ಹೊರಟಿರುವ ತಮ್ಮ ಪ್ರಾಣೇಶ್ವರನನ್ನು ಕಣ್ಣೀರಿನಿಂದಲೂ ಆಣೆ ಪ್ರಮಾಣಗಳಿಂದಲೂ ಮೃದುನುಡಿಗಳಿಂದಲೂ ತಡೆಯುತ್ತಾರೆ. ಎಲೈ ನಲ್ಲನೆ, ಬೆಳಗಿನವೇಳೆ ಪ್ರಯಾಣ ಹೊರಟಿರುವ ನಿನಗೆ ಇದೇ ಸುದಿನ.

ನಿನಗೆ ಮಂಗಳವಾಗಲಿ. ನೀನಿನ್ನು ಹೊರಡು. ನಿನ್ನಲ್ಲಿರುವ ಪ್ರೇಮಕ್ಕೆ ಅನುಗುಣವಾದ ಕಾರ್ಯವೇನೆಂದು ನಾನು ಯಾವುದನ್ನು ತಿಳಿದು ಮಾಡುವೆನೋ ಅದನ್ನು ನೀನು ಕೇಳುವೆ.

೭೭

ನಿರಾಶೆಯ ಪರಿಣಾಮ

**ದೃಷ್ಟಃ ಕಾತರನೇತ್ರಯಾ ಚಿರತರಂ ಬದ್ಧಾಂಜಲಿಂ ಯಾಚಿತಃ**
**ಪಶ್ಚಾದಂಶುಕಪಲ್ಲವೇನ ವಿಧೃತೋ ನಿರ್ವ್ಯಾಜಮಾಲಿಂಗಿತಃ ।**
**ಇತ್ಯಾಕ್ಷಿಪ್ಯ ಯದಾ ಸಮಸ್ತಮಘೃಣೋ ಗಂತುಂ ಪ್ರವೃತ್ತಃ ಶಠಃ**
**ಪೂರ್ವಂ ಪ್ರಾಣಪರಿಗ್ರಹೋ ದಯಿತಯಾ ಮುಕ್ತಸ್ತತೋ ವಲ್ಲಭಃ ॥**

ಕಾತರನೇತ್ರಯಾ-ಹೆದರಿದ ಕಣ್ಣುಗಳುಳ್ಳ ನಲ್ಲೆಯಿಂದ, ಚಿರತರ-ಬಹಳ ಹೊತ್ತು, ದೃಷ್ಟಃ-ನೋಡಲ್ಪಟ್ಟನು. ಬದ್ಧಾಂಜಲಿಂ-ಕೈಜೋಡಿಸಿ, ಯಾಚಿತಃ-ಪ್ರಾರ್ಥಿಸಲ್ಪಟ್ಟನು. ಪಶ್ಚಾತ್-ಅನಂತರ, ಅಂಶುಕ ಪಲ್ಲವೇನ-ಬಟ್ಟೆಯ ಅಂಚಿನಿಂದ, ವಿಧೃತಃ-ಹಿಡಿಯಲ್ಪಟ್ಟನು. ನಿರ್ವ್ಯಾಜಂ-ಉದ್ದೇಶಪೂರ್ವಕವಾಗಿ, ಆಲಿಂಗಿತಃ-ಅಪ್ಪಿಕೊಳ್ಳಲ್ಪಟ್ಟನು. ಯದಾ-ಯಾವಾಗ, ಇತಿ ಸಮಸ್ತಂ-ಇತ್ಯಾದಿಯಾದ ಎಲ್ಲವನ್ನೂ, ಆಕ್ಷಿಪ್ಯ-ಲಕ್ಷಿಸದೇ, ಅಘೃಣಃ-ಕರುಣೆಯಿಲ್ಲದೆ, ಶಠಃ-ವಂಚಕನಾದ ಪ್ರಿಯನು, ಗಂತುಂ-ಪ್ರಯಾಣ ಮಾಡುವುದಕ್ಕೆ, ಪ್ರವೃತ್ತಃ-ಪ್ರಯತ್ನಿಸಿದನೋ, ಪೂರ್ವಂ-ಅದಕ್ಕೆ ಮೊದಲೇ, ದಯಿತಯಾ-ನಲ್ಲೆಯಿಂದ, ಪ್ರಾಣಪರಿಗ್ರಹಃ-ಪ್ರಾಣಗಳ ಸಂಬಂಧ, ಮುಕ್ತಃ-ಬಿಡಲ್ಪಟ್ಟಿತು. ತತಃ-ಅನಂತರ ವಲ್ಲಭಃ-ಗಂಡನು, ಮುಕ್ತಃ-ಬಿಡಲ್ಪಟ್ಟನು.

ಪ್ರಯಾಣ ಹೊರಟಿದ್ದ ಇನಿಯನನ್ನು ಹೆದರುಗಣ್ಣಿನ ಪ್ರಿಯೆ ಬಹಳ ಹೊತ್ತು ನೋಡಿದಳು. ತನ್ನನ್ನು ಅಗಲಕೂಡದೆಂದು ಕೈಮುಗಿದು ಬೇಡಿದಳು. ಪ್ರಯಾಣವನ್ನು ತಡೆಯಲು ಅವನ ಬಟ್ಟೆಯ ಸೆರಗನ್ನು ಹಿಡಿದೆಳೆದಳು. ಉದ್ದೇಶಪೂರ್ವಕವಾಗಿ ಅವನನ್ನು ಅಪ್ಪಿಕೊಂಡಳು. ಆದರೆ ಇವಾವುದನ್ನು ಲಕ್ಷಿಸದೆ ಕರುಣೆಯಿಲ್ಲದ ಆ ವಂಚಕ

ನಾದ ಪ್ರಿಯನು ಯಾವಾಗ ಪ್ರಯಾಣಮಾಡಲು ಯತ್ನಿಸಿದನೋ ಆಗ ಅವನ ನಲ್ಲೆ ಪ್ರಾಣದ ಆಶೆಯನ್ನು ತೊರೆದು ಅವನನ್ನು ಬಿಟ್ಟುಬಿಟ್ಟಳು.

೭೮

ಕಣ್ಣೀರು

**ತಪ್ತೇ ಮಹಾವಿರಹವಹ್ನಿಶಿಖಾವಲೀಭಿ**
**ರಾಪಾಂಡುರಸ್ತನತಟೇ ಹೃದಯೇ ಪ್ರಿಯಾಯಾಃ ।**
**ಮನ್ಮಾರ್ಗವೀಕ್ಷಣ ನಿವೇಶಿತದೀನದೃಷ್ಟೇ**
**ರ್ನೂನಂ ಛಮಛಮಿತಿ ಬಾಷ್ಪಕಣಾಃ ಪತಂತಿ ॥**

ಮಹಾ-ಹೆಚ್ಚಾದ, ವಿರಹ-ಅಗಲಿಕೆಯೆಂಬ, ವಹ್ನಿ, ಬೆಂಕಿಯ-ಶಿಖಾ ವಲೀಭಿಃ-ಜ್ವಾಲೆಯ ವ್ಯಾಪ್ತಿಯಿಂದ, ಆಪಾಂಡುರ-ಸುತ್ತಲೂ ಬಿಳುಪಾಗಿ ರುವ, ಸ್ತನತಟೇ-ಕುಚಗಳಪ್ರಾಂತ ಭಾಗವುಳ್ಳ, ಮನ್ಮಾರ್ಗ-ನಾನು ಬರುವ ದಾರಿಯನ್ನು, ವೀಕ್ಷಣ-ನೋಡುವುದರಲ್ಲಿಯೇ, ನಿವೇಶಿತ-ಇಡ ಲ್ಪಟ್ಟ, ದೀನ-ದೈನ್ಯದಿಂದ ಕೂಡಿದ, ದೃಷ್ಟೇಃ-ನೋಟವುಳ್ಳ, ಪ್ರಿಯಾ ಯಾಃ ಪ್ರಿಯಳಾದ ನಲ್ಲೆಯ, ಹೃದಯೇ-ಹೃದಯವು, ತಪ್ತೇ-ಕಾದು ಹೋಗಿರಲು, ನೂನಂ-ನಿಜವಾಗಿ, ಬಾಷ್ಪಕಣಾಃ-ಕಣ್ಣೀರಿನ ಹನಿಗಳು, ಛಮಛಮಿತಿ-ಚೊಯ್ ಎಂಬ ಶಬ್ದದಿಂದ ಕೂಡಿ,ಪತಂತಿ-ಬೀಳುತ್ತವೆ.

ವಿರಹಾಗ್ನಿಯ ಜ್ವಾಲೆಯಿಂದ ಸ್ತನಗಳ ಪ್ರಾಂತ ಬಿಳುಪಾಗಲು ನಾನು ಬರುವ ದಾರಿಯಲ್ಲೇ ನಟ್ಟಕಣ್ಣುಳ್ಳ ದೀನಳಾದ ನನ್ನ ನಲ್ಲೆ ಹೃದಯವು ಕಾದು ಹೋಗಲು, ಅವಳ ಕಣ್ಣೀರಿನ ಬೆಚ್ಚನೆ ಹನಿಗಳು ಚೊಯ್ ಎಂಬ ಶಬ್ದದಿಂದ ಕೆಳಕ್ಕೆ ಬೀಳುತ್ತವೆ.

೭೯

ಸೋಗಿನ ಕಣ್ಣೀರು

**ಯಾಸ್ಯಾಮೀತಿ ಸಮುದ್ಯತಸ್ಯ ಗದಿತಂ ವಿಸ್ರಬ್ಧಮಾಕರ್ಣಿತಂ**
**ಗಚ್ಛನ್‌ದೂರಮುಪೇಕ್ಷಿತೋ ಮುಹುರಸೌವ್ಯಾವೃತ್ಯತಿಷ್ಠನ್ನಪಿ।**
**ತಚ್ಛೂನ್ಯೇ ಪುನರಾಸ್ಥಿತಾಸ್ಮಿ ಭವನೇ ಪ್ರಾಣಾಸ್ತ ಏತೇ ದೃಢಾಃ**
**ಸಖ್ಯಸ್ತಿಷ್ಠತ ಜೀವಿತವ್ಯಸನಿನೀ ದಂಭಾದಹಂ ರೋದಮಿ ॥**

ಸಖ್ಯಃ-ಗೆಳತಿಯರೇ, ಯಾಸ್ಯಾಮಿ-ಪ್ರಯಾಣ ಹೊರಡುತ್ತೇನೆ, ಇತಿ-ಹೀಗೆಂದು, ಸಮುದ್ಯತಸ್ಯ-ಪ್ರಯಾಣ ಸಿದ್ಧನಾದ ಪ್ರಿಯನ,

ಗದಿತಂ-ಮಾತು, ವಿಸ್ರಬ್ಧಂ-ಧೀರಳಾಗಿ, ಆಕರ್ಣಿತಂ-ಕೇಳಲ್ಪಟ್ಟಿತು. ದೂರಂ-ದೂರವಾಗಿ, ಗಚ್ಛನ್-ಹೋಗುತ್ತಿದ್ದ, ಅಸೌ-ಈ ಇನಿಯನು, ವ್ಯಾವೃತ್ಯ-ಹಿಂದಿರುಗಿ, ಮುಹುಃ-ಬಾರಿ ಬಾರಿಗೂ, ತಿಷ್ಠನ್ನಪಿ-ನಿಂತಿದ್ದರೂ, ಉಪೇಕ್ಷಿತಃ-ತಿರಸ್ಕರಿಸಲ್ಪಟ್ಟನು. ಪುನಃ-ತಿರುಗಿ, ತಚ್ಛೂನ್ಯೇ-ಅವನಿಲ್ಲದ, ಭುವನೇ-ಮನೆಯಲ್ಲಿ, ಆಸ್ಥಿತಾ ಅಸ್ಮಿ-ನೆಲೆಯಾಗಿ ನಿಂತಿದ್ದೇನೆ. ಏತೇ-ಈ, ತೇಪ್ರಾಣಾಃ- ಆ ನಿನ್ನ, ಪ್ರಾಣಿಗಳು, ದೃಢಾಃ-ಗಟ್ಟಿಯಾಗಿ ನಿಂತಿವೆ. ಅಹಂ-ನಾನಾದರೊ, ದಂಭಾತ್-ಲೋಕಾಡಂಬರಕ್ಕಾಗಿ, ಜೀವಿತವ್ಯಸನಿನೀ-ಪ್ರಾಣದ ಮೇಲೆ ಆಸೆಯುಳ್ಳವಳಾಗಿ, ರೋದಿಮಿ-ಅಳುತ್ತಿದ್ದೇನೆ. ತಿಷ್ಠತ-ಸುಮ್ಮನಿರಿ.

ಗೆಳತಿಯರೇ, 'ನಾನು ಪ್ರಯಾಣ ಮಾಡುತ್ತೇನೆ' ಎಂದು ಪ್ರಯಾಣಸಿದ್ಧನಾಗಿ ನುಡಿದ ನನ್ನ ನಲ್ಲನ ನುಡಿಯನ್ನು ಧೈರ್ಯದಿಂದ ಕೇಳಿದೆನು. ಆದರೆ ಹೊರಡಲು ಇಷ್ಟವಿಲ್ಲದೆ ಬಾರಿ ಬಾರಿಗೂ ಹಿಂದಿರುಗಿ, ನನ್ನನ್ನೇ ನೋಡುತ್ತ ನಿಂತಿದ್ದ ಇನಿಯನನ್ನು ತಿರಸ್ಕರಿಸಿದೆನು. ಅವನು ಹೊರಟು ಹೋದ ಮೇಲೆ ಅವನಿಲ್ಲದ ಮನೆಯಲ್ಲೇ ಒಬ್ಬಂಟಿಗಳಾಗಿ ಈಗ ನಿಂತಿದ್ದೇನೆ. ಈ ನನ್ನ ಪ್ರಾಣಗಳೂ ದೃಢವಾಗಿವೆ. ನಾನಾದರೋ ಲೋಕಾಡಂಬರಕ್ಕಾಗಿ ಪ್ರಾಣದ ಮೇಲಿನ ಆಸೆಯಿಂದ ಅಳುತ್ತಿದ್ದೇನೆ ;

## ೮೦

## ವಿರಹದ ಪರಿಣಾಮ

**ಪ್ರಸ್ಥಾನಂ ವಲಯೈಃ ಕೃತಂ ಪ್ರಿಯಸಖೈರಸ್ರೈರಜಸ್ರಂ ಗತಂ**
**ಧೃತ್ಯಾ ನ ಕ್ಷಣಮಾಸಿತಂ ವ್ಯವಸಿತಂ ಚಿತ್ತೇನ ಗಂತುಂ ಪುರಃ ।**
**ಯಾತುಂ ನಿಶ್ಚಿತಚೇತಸಿ ಪ್ರಿಯತಮೇ ಸರ್ವೇ ಸಮಂ ಪ್ರಸ್ಥಿತಾ**
**ಗಂತವ್ಯೇ ಸತಿ ಜೀವಿತ ಪ್ರಿಯಸುಹೃತ್ಸಾರ್ಥಃ ಕಿಮು ತ್ಯಜ್ಯತೇ॥**

ಪ್ರಿಯಸಖೈಃ-ತನ್ನ ನಲ್ಲನಿಗೆ ಪ್ರಿಯಸ್ನೇಹಿತರಂತಿದ್ದ, ವಲಯೈಃ-ನನ್ನ ಕೈ ಬಳೆಗಳಿಂದ, ಪ್ರಸ್ಥಾನಂ-ಪ್ರಯಾಣ, ಕೃತಂ-ನಿಶ್ಚೈಸಲ್ಪಟ್ಟಿತು. (ಪ್ರಿಯನ ವಿರಹದಿಂದ ಕೃಶಳಾದ ನಲ್ಲೆಯ ಕೈ ಬಳೆಗಳು ತಾವಿದ್ದ ಸ್ಥಳದಿಂದ ಜಾರಿದವು) ಅಸ್ರೈಃ-ನನ್ನ ಕಣ್ಣೀರಿನಿಂದ, ಅಜಸ್ರಂ-ಯಾವಾಗಲೂ; ಗತಂ-ಗಮಿಸಲ್ಪಟ್ಟಿತು. (ನಲ್ಲನ ಪ್ರಯಾಣದಿಂದ

ದುಃಖಗೊಂಡ ನಲ್ಲೆಯ ಕಣ್ಣಿನಿಂದ ನೀರು ಸಂತತವಾಗಿ ಸುರಿಯಿತು) ಧೃತ್ಯಾ-ಧೈರ್ಯದಿಂದ, ಕ್ಷಣಂ-ಕ್ಷಣಕಾಲವಾದರೂ, ನ ಆಸಿತಂ-ನಿಲ್ಲಲ್ಪಡ ಲಿಲ್ಲ (ಎಷ್ಟೇ ಧೈರ್ಯತಂದುಕೊಂಡರೂ ಕಣ್ಣಿನಿಂದ ಪ್ರವಾಹ ನಿಲ್ಲಲಿಲ್ಲ) ಚಿತ್ತೇನ-ಮನಸ್ಸಿನಿಂದ, ಪುರಃ-ಎಲ್ಲಕ್ಕೂ ಮೊದಲೇ, ಗಂತುಂ-ಹೋಗಲು, ವ್ಯವಸಿತಂ-ಪ್ರಯತ್ನ ನಡೆಸಲ್ಪಟ್ಟಿತು. (ಎಲ್ಲಕ್ಕೂ ಮೊದಲು ನನ್ನ ಮನಸ್ಸು ಪ್ರಿಯನಿರುವಲ್ಲಿಗೆ ಹೋಯಿತು) ಹೀಗಿರುವಲ್ಲಿ, ಹೇ ಜೀವಿತ-ಎಲೈ ಪ್ರಾಣವೇ, ಪ್ರಿಯತಮೇ-ನನ್ನ ಪ್ರಾಣೇಶ್ವರನು, ಯಾತುಂ-ಪ್ರಯಾಣ ಮಾಡಲು, ನಿಶ್ಚಿತಚೇತಸಿ-ದೃಢಮನಸ್ಸುಳ್ಳವನಾಗಲು, ಸರ್ವೇ-ಅವನ ಎಲ್ಲ ಸ್ನೇಹಿತರು, ಸಮಂ-ಇವನೊಡನೆಯೇ, ಪ್ರಸ್ಥಿತಾಃ-ಪ್ರಯಾಣಸನ್ನದ್ಧರಾದರು. ಗಂತವ್ಯೇ ಸತಿ-(ನೀನು) ಹೋಗಲೇ ಬೇಕಾಗಿರುವ ಈ ಸಮಯದಲ್ಲಿ, ಪ್ರಿಯಸುಹೃತ್-ಪ್ರಿಯಸ್ನೇಹಿತರ, ಸಾರ್ಥಃ-ಗುಂಪು, ಕಿಮು-ಯಾವ ಕಾರಣಕ್ಕಾಗಿ, ತ್ಯಜ್ಯತೇ-ಬಿಡಲ್ಪಡು ತ್ತದೆ. (ನಿನ್ನ ಪ್ರಿಯಸ್ನೇಹಿತರನ್ನು ಬಿಟ್ಟು ನೀನೊಬ್ಬನೇ ಒಂಟಿಯಾಗಿ ಏಕೆ ಉಳಿದೆ ?)

'ನನ್ನ ನಲ್ಲನು ಪ್ರಯಾಣ ಹೊರಡಲು ಅವನಿಗೆ ಪ್ರಿಯಸ್ನೇಹಿತ ರಂತಿರುವ ನನ್ನ ಕೈ ಬಳೆಗಳು ಅವನೊಡನೆ ಪ್ರಯಾಣ ಮಾಡಲು ನಿಶ್ಚೈಸಿದವು. ನನ್ನ ಕಣ್ಣೀರು ಕಣ್ಣನ್ನು ಬಿಟ್ಟು ಮುಂದೆ ನಡೆಯುತ್ತಿದೆ. ನನ್ನಲ್ಲಿ ಬಹುಕಾಲ ಮನೆಮಾಡಿಕೊಂಡಿದ್ದ ಧೈರ್ಯವಂತೂ, ಕ್ಷಣಕಾಲವೂ. ನನ್ನಲ್ಲಿ ನಿಲ್ಲಲಾರದು. ಮನಸ್ಸು ಎಲ್ಲರಿಗಿಂತ ಮೊದಲೇಹೊರಟು ನಿಂತಿದೆ. ಹೀಗೆ ಅವನ ಸ್ನೇಹಿತರ ಗುಂಪೆಲ್ಲ ನನ್ನ ಪ್ರಿಯತಮನನ್ನು ಹಿಂಬಾಲಿಸು ತ್ತಿರುವಲ್ಲಿ, ಎಲೆ ಪ್ರಾಣವೇ, ನೀನೊಬ್ಬನು ಮಾತ್ರ ನಿನ್ನ ಗೆಳೆಯರ ಗುಂಪನ್ನು ಬಿಟ್ಟು ಒಂಟಿಯಾಗಿರಬಯಸುವೆಯಾ ?'

೮೧

ಬೇಡಿಕೆ

**ಮಲಯಮರುತಾಂ ವ್ರಾತಾ ವಾತಾ ವಿಕಾಸಿತಮಲ್ಲಿಕಾ**
**ಪರಿಮಲಭರೋ ಭಗ್ನೋ ಗ್ರೀಷ್ಮಸ್ತ್ವಮುತ್ಸಹಸೇ ಯದಿ ।**
**ಘನ ಘಟಯಿತುಂ ತಂ ನಿಃಸ್ನೇಹಂ ಯ ಏವ ನಿವರ್ತನೇ**
**ಪ್ರಭವತಿ ಗವಾಂ ಕಿಂ ನಚ್ಛಿನ್ನಂ ಸ ಏವ ಧನಂಜಯಃ ॥**

ಘನ-ಎಲೈ ವರ್ಷಋತುವಿನ ಮೇಘವೇ, ಮಲಯಮರುತಾಂ-ಮಲಯ ಪರ್ವತದಿಂದ ಸುಗಂಧವಾಗಿ ಬೀಸುವ ವಸಂತದ ಗಾಳಿಯ, ವ್ರಾತಾಃ-ಸಮೂಹಗಳು, ವಾತಾಃ-ಬೀಸಿ ಹೊರಟು ಹೋದವು. ವಿಕಾಸಿತ-ಅರಳಿಸಿದ, ಮಲ್ಲಿಕಾ-ಮಲ್ಲಿಗೆಯ ಹೂವಿನ, ಪರಿಮಲ-ಸುವಾಸನೆಯ, ಭರಃ-ಭಾರವುಳ್ಳ, ಗ್ರೀಷ್ಮಃ-ಗ್ರೀಷ್ಮಋತುವೂ, ಭಗ್ನಃ-ನಾಶವಾಗಿ ಹೋಯಿತು. ತ್ವಂ-ನೀನು, ನಿಃಸ್ನೇಹಂ-ಪ್ರೇಮದಿಂದ ದೂರವಾಗಿರುವ, ತಂ-ಆ ನನ್ನ ಪ್ರಿಯನನ್ನು, ಘಟಯಿತುಂ-ಮತ್ತೆ ಸೇರಿಸುವುದಕ್ಕೆ ಉತ್ಸಹಸೇಯದಿ ಪ್ರಯತ್ನಿಸಿದುದೇ ಆದರೆ, ನಃ-ನಮಗೆ, ಛಿನ್ನಂ-ನಷ್ಟವಾಗುವುದಾದರೂ, ಕಿಂ-ಹೇಗೆ, ಗವಾಂ-ದನಗಳ (ಗೂಳಿಗಳ) ನಿವರ್ತನೇ-ಹಿಂದಿರುಗಿಸುವುದರದಲ್ಲಿ, ಯಃ ಏವ-ಯಾವನೇ, ಪ್ರಭವತಿ-ಸಮರ್ಥನಾಗುವನೋ, ಸಃ ಏವ-ಅವನೇ, ಧನಂಜಯಃ-ಅರ್ಜುನನು.

'ಎಲೈ ವರ್ಷಕಾಲದ ಮೇಘವೇ, ಮಲಯಪರ್ವತದ ಸುಗಂಧದಿಂದ ಕೂಡಿ ಬೀಸುವ ಗಾಳಿ ಹೊರಟು ಹೋಯಿತು. ಅರಳಿದ ಮಲ್ಲಿಗೆಯ ಹೂವಿಗೆ ಸುವಾಸನೆಯ ಭಾರವನ್ನು ಹೊತ್ತು ತರುವ ಗ್ರೀಷ್ಮವೂ ಭಗ್ನವಾಗಿ ಹೋಯಿತು. ನೀನು ಪ್ರೇಮದಿಂದ ದೂರನಾಗಿರುವ ಆ ನನ್ನ ನಲ್ಲನನ್ನು ನನ್ನೊಡನೆ ತಂದು ಕೂಡಿಸಲು ಯತ್ನಿಸಿದುದೇ ಆದರೆ ನಿನಗಾಗುವ ನಷ್ಟವೇನು? ಗೂಳಿಗಳನ್ನು ಅವುಗಳ ನಿವಾಸಸ್ಥಾನಕ್ಕೆ ಹಿಂದಿರಿಗಿಸುವುದರಲ್ಲಿ ಯಾವನು ಸಮರ್ಥನೋ ಅವನೇ ಧನಂಜಯ.

೮೨

ವಿರಹವ್ಯಥೆ

**ದೇಶೈರಂತರಿತಾ ಶತೈಶ್ಚ ಸರಿತಾಮುರ್ವೀಭೃತಾಂ ಕಾನನೈ**
**ರ್ಯತ್ನೇನಾಪಿ ನ ಯಾತಿ ಲೋಚನಪಥಂ ಕಾಂತೇಪಿ ಜಾನನ್ನಪಿ**
**ಉದ್ಗ್ರೀವಶ್ಚರಣಾರ್ಧರುದ್ಧವಸುಧಃ ಪ್ರೋನ್ಮೃಜ್ಯ ಸಾಸ್ರೇ ದೃಶೌ**
**ತಾಮಾಶಾಂ ಪಥಿಕಸ್ತಥಾಪಿ ಕಿಮಪಿ ಧ್ಯಾಯನ್ ಪುನರ್ವೀಕ್ಷತೇ॥**

ಸರಿತಾಂ-ನದಿಗಳ, ಉರ್ವೀಭೃತಾಂ-ಪರ್ವತಗಳ, ಶತೈಃ-ಅನೇಕ ಸಂಖ್ಯೆಯ, ದೇಶೈಃ-ಪ್ರದೇಶಗಳಿಂದಲೂ, ಕಾನನೈಃ ಚ-ಅನೇಕ ಕಾಡು

ಗಳಿಂದಲೂ, ಅಂತರಿತಾ-ಅಡ್ಡಗೊಳಿಸಲ್ಪಟ್ಟದ್ದಾಳೆ. ಕಾಂತಾ-ಪ್ರಿಯತಮೆ, ಯತ್ನೇನ ಅಪಿ-ವಿಶೇಷವಾದ ಯಾವ ಪ್ರಯತ್ನದಿಂದಲೂ, ಲೋಚನಪಥಂ-ದೃಷ್ಟಿಗೋಚರವಾಗುವಿಕೆಯನ್ನು, ನ ಯಾತಿ-ಹೊಂದುವುದಿಲ್ಲ. ಇತಿ-ಹೀಗೆ, ಜಾನನ್ನಪಿ-ತಿಳಿದಿದ್ದರೂ, ಪಥಿಕಃ-ದೇಶಾಂತರಕ್ಕೆ ಪ್ರಯಾಣ ಮಾಡುವ ಪ್ರಿಯನು, ತಥಾಪಿ-ಹಾಗಾದರೂ, ಪುನಃ-ಮತ್ತೆ ಮತ್ತೆ, ಕಿಮಪಿ-ಏನನ್ನೋ, ಧ್ಯಾಯನ್-ಯೋಚಿಸುತ್ತ, ಉದ್ಗ್ರೀವಃ-ಕತ್ತೆತ್ತಿ, ಚರಣಾರ್ಧ-ಅರ್ಧಕಾಲಿನಿಂದ, ರುದ್ಧ-ತಡೆದ, ವಸುಧಃ-ನೆಲವುಳ್ಳವನಾಗಿ, ಸಾಸ್ರೇ-ಕಣ್ಣೀರಿನಿಂದ ತುಂಬಿದ, ದೃಶೌ-ಕಣ್ಣುಗಳನ್ನು, ಪ್ರೋನ್ಮೃಜ್ಯ-ಉಜ್ಜಿಕೊಂಡು, ತಾಂ-ಆ (ತನ್ನ ಪ್ರಿಯತಮೆಯ) ಆಶಾಂ-ದಿಕ್ಕನ್ನೇ, ವೀಕ್ಷತೇ-ನೋಡುತ್ತಾನೆ.

ಪ್ರಿಯನಿಗೂ ಅವನ ಪ್ರಿಯತಮೆಗೂ ಅನೇಕ ನದಿಗಳು, ಬೆಟ್ಟಗಳು, ದೇಶಗಳು, ಕಾಡುಗಳು ಅಡ್ಡಲಾಗಿವೆ. ವಿಶೇಷ ಪ್ರಯತ್ನದಿಂದಲೂ ಪ್ರಿಯತಮೆ ಕಣ್ಣಿಗೆ ಬೀಳಳು. ಈ ಅಂಶ ತಿಳಿದಿದ್ದರೂ ದೇಶಾಂತರಕ್ಕೆ ಪ್ರಯಾಣ ಮಾಡಲಿರುವ ಇನಿಯನು ಮತ್ತೆ ಮತ್ತೆ ಏನನ್ನೋ ಯೋಚಿಸುತ್ತ ಕತ್ತೆತ್ತಿ ಹಿಮ್ಮಡಿಯನ್ನು ನೆಲಕ್ಕೂರಿ, ನೀರಿನಿಂದ ಕೂಡಿದ ಕಣ್ಣುಗಳನ್ನು ಉಜ್ಜಿಕೊಳ್ಳುತ್ತ ತನ್ನ ಪ್ರಿಯತಮೆಯಿರುವ ದಿಕ್ಕನ್ನೇ ನೋಡುತ್ತಾನೆ.

೮೩

ವಿರಹದ ಪರಿಣಾಮ

**ಧೀರಂ ವಾರಿಧರಸ್ಯ ವಾರಿ ಕಿರತಃ ಶ್ರುತ್ವಾ ನಿಶೀಥೇ ಧ್ವನಿಂ**
**ದೀರ್ಘೋಚ್ಛ್ವಸಮುದಶ್ರುಣಾ ವಿರಹಿಣೀಂ ಬಾಲಾಂ ಚಿರಂ ಧ್ಯಾಯತಾ ||**
**ಅಧ್ವನ್ಯೇನ ವಿಮುಕ್ತಕಂಠಮಖಿಲಾಂ ರಾತ್ರಿಂ ತಥಾ ಕ್ರಂದಿತಂ**
**ಗ್ರಾಮೀಣೈಃ ಪುನರಧ್ವಗಸ್ಯ ವಸತಿರ್ಗ್ರಾಮೇ ನಿಷಿದ್ಧಾ ಯಥಾ||**

ನಿಶೀಥೇ-ಅರ್ಧರಾತ್ರಿಯಲ್ಲಿ, ವಾರಿ-ನೀರನ್ನು, ಕಿರತಃ-ಎರಚತಕ್ಕ, ವಾರಿಧರಸ್ಯ-ಮೇಘದ, ಧೀರಂ-ಗಂಭೀರವಾದ, ಧ್ವನಿಂ-ಶಬ್ದವನ್ನು, ಶ್ರುತ್ವಾ-ಕೇಳಿ, ಚಿರಂ-ಬಹುಕಾಲದಿಂದ, ವಿರಹಿಣೀಂ-ತನ್ನ

ನ್ನಗಲಿರುವ, ಬಾಲಾಂ-ಮುಗ್ಧಳಾದ ತನ್ನ ಸತಿಯನ್ನು, ದೀರ್ಘೋಚ್ಛ್ವಸಂ-ನೀಳವಾಗಿ ಉಸುರಿಡುತ್ತಾ, ಉದಶ್ರುಣಾ-ಕಣ್ಣೀರಿಡುತ್ತಾ, ಧ್ಯಾಯತಾ-ಸದಾ ಯೋಚನೆ ಮಾಡುತ್ತಿದ್ದ, ಅಧ್ವನ್ಯೇನ-ಪ್ರಯಾಣಿಕನೊಬ್ಬನಿಂದ, ಅಖಿಲಾಂ-ಸಂಪೂರ್ಣವಾದ, ರಾತ್ರಿಂ-ರಾತ್ರಿಯಲ್ಲೆಲ್ಲಾ, ಪಿಮುಕ್ತಕಂಠಂ-ಗಟ್ಟಿಯಾದ ಧ್ವನಿಯುಳ್ಳದ್ದಾಗಿ, ತಥಾ-ಆ ರೀತಿ, ಕ್ರಂದಿತಂ-ಅರಚಲ್ಪಟ್ಟಿತು. ಯಥಾ-ಹೇಗೆಂದರೆ, ಅಧ್ವಗಸ್ಯ ಪುನಃ-ಆ ಪ್ರಯಾಣಿಕನಿಗಾದರೋ, ವಸತಿಃ-ವಾಸಮಾಡುವಿಕೆ, ಗ್ರಾಮೇ-ಆ ಊರಿನಲ್ಲಿ, ಗ್ರಾಮೀಣ್ಯೈಃ-ಆ ಊರಿನವರಿಂದ, ನಿಷಿದ್ಧಾ-ತಡೆಯಲ್ಪಟ್ಟಿತು.

ಸಮರಾತ್ರಿಯಲ್ಲಿ ಮಳೆಯನ್ನು ಸುರಿಸಿ ಗುಡುಗುತ್ತಿದ್ದ ಮೇಘದ ಗಂಭೀರವಾದ ಧ್ವನಿಯನ್ನು ಕೇಳಿ ಬಹುಕಾಲ ತನ್ನನ್ನಗಲಿದ ಮುಗ್ಧಳಾದ ಸತಿಯನ್ನು ನೆನೆದು ನಿಟ್ಟುಸಿರಿಡುತ್ತ ಕಣ್ಣೀರನ್ನು ತುಂಬಿ ಯೋಚಿಸುತ್ತಿದ್ದ ಪ್ರಯಾಣಿಕನೊಬ್ಬನು ರಾತ್ರಿಯೆಲ್ಲ ಗಟ್ಟಿಯಾಗಿ ಗೋಳಿಟ್ಟನು. ಅದನ್ನು ಕೇಳಿದ ಊರಿನವರು ಅವನನ್ನು ತಮ್ಮ ಊರಿನಿಂದ ಅಟ್ಟಿದರು.

೮೪

ವಿರಹದ ಪರಿಣಾಮ

**ರಾತ್ರೌ ವಾರಿಭರಾಲಸಾಂಬುದ ರವೋದ್ವಿಗ್ನೇನ ಜಾತಾಶ್ರುಣಾ**
**ಪಾಂಥೇನಾತ್ಮವಿಯೋಗದುಃಖಪಿಶುನಂ ಗೀತಂ ತಥೋತ್ಕಂಠಯಾ ।**
**ಆಸ್ತಾಂ ಜೀವಿತಹಾರಿಣಃ ಪ್ರವಸನಾಲಾಪಸ್ಯ ಸಂಕೀರ್ತನಂ ॥**
**ಮಾನಸ್ಯಾಪಿ ಜಲಾಂಜಲಿಃ ಸರಭಸಂ ಲೋಕೇನ ದತ್ತೋಯಥಾ**

ರಾತ್ರೌ-ರಾತ್ರಿವೇಳೆ, ವಾರಿಭರ-ನೀರನ್ನು ಹೊಟ್ಟೆಯಲ್ಲಿ ಹೊತ್ತಿರುವ ಭಾರದಿಂದ, ಅಲಸ-ಮಂದವಾದ, ಅಂಬುದ-ಮೇಘದ, ರವ-ಧ್ವನಿಯಿಂದ, ಉದ್ವಿಗ್ನೇನ-ಕಾಮುಕಾವಸ್ಥೆಯನ್ನು ಪಡೆದ, ಜಾತಾಶ್ರುಣಾ-ಉಂಟಾದ ಕಣ್ಣೀರುಳ್ಳ, ಪಾಂಥೇನ-ಪ್ರಯಾಣಿಕನಿಂದ, ಆತ್ಮವಿಯೋಗ-ತನ್ನ ಪ್ರಿಯೆಯ ಅಗಲಿಕೆಯ, ದುಃಖ-ದುಃಖವನ್ನು, ಪಿಶುನಂ-ಸೂಚಿಸು

ವಂತೆ, ತಥಾ-ಹಾಗೆ, ಉತ್ಕಂಠಯಾ-ಅತ್ಯಂತ ಉದ್ವೇಗದಿಂದ, ಗೀತಂ-ಹಾಡಲ್ಪಟ್ಟಿತು. ಯಥಾ-ಹೇಗೆಂದರೆ, ಜೀವಿತ ಹಾರಿಣಃ-ಪ್ರಾಣವನ್ನೇ ಅಪಹರಿಸುವ, ಪ್ರವಸನಾಲಾಪಸ್ಯ-ಪರದೇಶ ಪ್ರಯಾಣದ, ಸಂಕೀರ್ತನಂ-ಹೆಸರು ಹೇಳುವುದು, ಆಸ್ತಾಂ-ಒಂದು ಕಡೆ ಇರಲಿ. ಮಾನಸ್ಯಾಪಿ-ಪ್ರಣಯಕೋಪಕ್ಕೂ, ಸರಭಸಂ-ಬಹುಜಾಗ್ರತೆ, ಲೋಕೇನ-ಈ ಲೋಕದಿಂದಲೇ, ಜಲಾಂಜಲಿಃ-ತರ್ಪಣವು, ದತ್ತಃ-ಕೊಡಲ್ಪಟ್ಟಿತು.

ರಾತ್ರಿಯ ವೇಳೆ ನೀರುಂಡ ಮುಗುಲಿನ ಧ್ವನಿಯನ್ನು ಕೇಳಿ ಪ್ರಯಾಣಿಕನು ತನ್ನ ನಲ್ಲೆಯನ್ನು ನೆನೆದು ಕಣ್ಣೀರು ತುಂಬಿ ಹುಚ್ಚನಂತಾದನು. ತನ್ನ ನಲ್ಲೆಯ ಅಗಲಿಕೆಯ ದುಃಖವನ್ನು ಸೂಚಿಸುವಂತೆ ಅತ್ಯಂತ ಉದ್ವೇಗದಿಂದ 'ಪ್ರಾಣವನ್ನೇ ಅಪಹರಿಸುವ ಪರದೇಶದ ಪ್ರಯಾಣದ ಹೆಸರನ್ನು ಹೇಳುವುದು ಹಾಗಿರಲಿ. ಪ್ರಿಯೆಯೊಡನೆ ಕೋಪವನ್ನು ಪ್ರದರ್ಶಿಸುವುದಕ್ಕೂ ತಿಲಾಂಜಲಿಯನ್ನು ಕೊಟ್ಟೆ' ಎಂದು ಹಾಡಿದನು.

## ೮೫

## ನಲ್ಲೆಯ ನೆನಪು

**ಆಲಂಬ್ಯಾಂಗಣವಾಟಿಕಾಪರಿಸರೇ ಚೂತದ್ರುಮೇ ಮಂಜರೀಂ**
**ಸರ್ಪತ್ಸಾಂದ್ರಪರಾಗಲಂಪಟರಟದ್ಭೃಂಗಾಂಗನಾ ಶೋಭಿನೀಂ ।**
**ಮನ್ಯೇ ಸ್ವಾಂ ತನುಮುತ್ತರೀಯಶಕಲೇನಾಚ್ಛಾದ್ಯ**
**ಬಾಲಾ ಸ್ಫುರ**
**ತ್ಕಂಠಧ್ವಾನನಿರೋಧಕಂಪಿತಕುಚಶ್ವಾಸೋದ್ಗಮಾ**
**ರೋದಿತಿ ॥**

ಬಾಲಾ-(ನನ್ನ) ಪ್ರಿಯೆ, ಅಂಗಣ-ಮನೆಯ ಅಂಗಳದ, ವಾಟಿಕಾ-ಉದ್ಯಾನದ, ಪರಿಸರೇ-ಹತ್ತಿರದಲ್ಲಿರುವ, ಚೂತದ್ರುಮೇ-ಮಾವಿನಮರದಲ್ಲಿ, ಸರ್ಪತ್-ಸಂಚರಿಸುವ, ಸಾಂದ್ರ-ಒತ್ತಾದ, ಪರಾಗ-ಹೂವಿನ ಧೂಳಿಯಲ್ಲಿ, ಲಂಪಟ-ಆಸೆಪಟ್ಟು, ರಟತ್-ಅಲೆಯುವ, ಭೃಂಗಾಂಗನಾ-ಹೆಣ್ಣು ದುಂಬಿಗಳಿಂದ, ಶೋಭಿನೀಂ-ಅಲಂಕೃತವಾಗಿರುವ, ಮಂಜರೀಂ-ಬಳ್ಳಿಯನ್ನು, ಆಲಂಬ್ಯ-ಹಿಡಿದುಕೊಂಡು, ಸ್ವಾಂ-ತನ್ನ

ದಾದ, ತನುಂ-ಶರೀರವನ್ನು ಉತ್ತರೀಯಶಕಲೇನ-ಹೊದಿಯುವ ಬಟ್ಟೆಯ ಸೆರಗಿನಿಂದ, ಆಚ್ಛಾದ್ಯ-ಮುಚ್ಚಿಕೊಂಡು, ಸ್ಫುರತ್-ಸುಂದರ ವಾದ, ಕಂಠಧ್ವಾನಂ-ಕಂಠಶಬ್ದದ, ನಿರೋಧ-ತಡೆಯುವುದರಿಂದ, ಕಂಪಿತ-ನಡುಗುತ್ತಿರುವ, ಕುಚ-ಸ್ತನಗಳುಳ್ಳ, ಶ್ವಾಸ-ಮೇಲೆ ಬರುವ ಉಸಿರಿನ, ಉದ್ಗಮಾ-ಏರುವಿಕೆಯುಳ್ಳವಳಾಗಿ, ರೋದಿತಿ-ಅಳುತ್ತಿದ್ದಾಳೆ ಎಂದು ಮನ್ಯೇ ತಿಳಿಯುತ್ತೇನೆ.

ನನ್ನ ನಲ್ಲೆ ನಮ್ಮ ಮನೆಯ ಅಂಗಳದ ಉದ್ಯಾನದ ಸಮೀಪದಲ್ಲಿ ರುವ ಮಾವಿನ ಮರದಲ್ಲಿ ಹೂವಿಗೆ ಆಸೆಪಟ್ಟು ಅದರ ಧೂಳಿಯಿಂದ ಮೆತ್ತಿಕೊಂಡ ಹೆಣ್ಣು ದುಂಬಿಗಳಿಂದ ಅಲಂಕೃತವಾದ ಬಳ್ಳಿಯೊಂದನ್ನು ಹಿಡಿದುಕೊಂಡು ತನ್ನ ದೇಹವನ್ನು ಉತ್ತರೀಯದಿಂದ ಮುಚ್ಚಿಕೊಂಡು, ಮಧುರವಾದ ಕಂಠದಿಂದ ಅಳುವನ್ನು ತಡೆ ತಡೆದು ಮೇಲುಸಿರಿನಿಂದ ನಡುಗುತ್ತಿರುವ ಸ್ತನಗಳುಳ್ಳವಳಾಗಿ ಅಳುತ್ತಿರುವಳೆಂದು ತಿಳಿಯುತ್ತೇನೆ.

## ೭೬

### ಸ್ವಾಗತ

**ದೀರ್ಘಾ ವಂದನಮಾಲಿಕಾ ವಿರಚಿತಾ ದೃಷ್ಟೈವ ನೇಂದೀವರೈಃ**
**ಪುಷ್ಪಾಣಾಂ ಪ್ರಕರಃ ಸ್ಮಿತೇನ ರಚಿತೋ ನೋ ಕುಂದ**
**ಜಾತ್ಯಾದಿಭಿಃ ।**
**ದತ್ತಃ ಸ್ವೇದಮುಚಾ ಪಯೋಧರಭರೇಣಾರ್ಘೋ ನ**
**ಕುಂಭಾಂಭಸಾ**
**ಸ್ವೈರೇವಾವಯವೈಃ ಪ್ರಿಯಸ್ಯ ವಿಶತಸ್ತನ್ವ್ಯಾ ಕೃತಂ**
**ಮಂಗಳಂ ॥**

ದೀರ್ಘಾ-ನೀಳವಾದ, ವಂದನಮಾಲಿಕಾ-ಸ್ವಾಗತದ ಪುಷ್ಪ ಮಾಲಿಕೆ, ದೃಷ್ಟ್ಯಾ ಏವ-ಕೇವಲ ನೇತ್ರಗಳ ದೃಷ್ಟಿಯಿಂದಲೇ, ವಿರ ಚಿತಾ-ಮಾಡಲ್ಪಟ್ಟಿತು. ಇಂದೀವರೈಃ-ಕಮಲಗಳಿಂದ, ನ-ಇಲ್ಲ. ಪುಷ್ಪಾ ಣಾಂ-ಹೂವುಗಳ, ಪ್ರಕರಃ ಎರಚುವಿಕೆಯು, ಸ್ಮಿತೇನ-ಕೇವಲ ಮುಗುಳು ನಗೆಯಿಂದಲೇ, ರಚಿತಃ-ಮಾಡಲ್ಪಟ್ಟಿತು. ಕುಂದಜಾತ್ಯಾದಿಭಿಃ-ಮಲ್ಲಿಗೆ ಮತ್ತು ಜಾಜೀ ಹೂವುಗಳಿಂದ, ನೋ ರಚಿತಃ-ಮಾಡಲ್ಪಡಲಿಲ್ಲ. ಸ್ವೇದ

ಮುಚಾ-ಬೆವರನ್ನು ಸುರಿಸುವ ಪಯೋಧರಭರೇಣ–ಸ್ತನಭಾರದಿಂದಲೇ, ಅರ್ಘಃ-ಪೂಜಾರ್ಹವಾದ ನೀರು, ದತ್ತಃ-ಕೊಡಲ್ಪಟ್ಟಿತು. ಕುಭಾಂಭಸಾ-ಕಲಶೋದಕದಿಂದ, ನ–ಕೊಡಲಿಲ್ಲ. ವಿಶತಃ–ಮನೆಯನ್ನು ಪ್ರವೇಶಿಸುವ, ಪ್ರಿಯಸ್ಯ–ಇನಿಯನಿಗೆ ತನ್ವ್ಯಾ-ತರುಣಿಯಿಂದ, ಸ್ವೈಃ ತನ್ನದೇ ಆದ, ಅವಯವೈಃ-ಅವಯವಗಳಿಂದ, ಮಂಗಳಂ-ಸತ್ಕಾರವು, ಕೃತಂ-ಮಾಡಲ್ಪಟ್ಟಿತು.

ತನ್ನ ಕುಡಿಕಣ್ಣಿನ ನೋಟದಿಂದಲೇ ಪ್ರಿಯತಮೆ ನೀಳವಾದ ಸ್ವಾಗತದ ಪುಷ್ಪಮಾಲಿಕೆಯನ್ನು ರಚಿಸಿದಳು ; ಕಮಲದಿಂದಲ್ಲ. ಮುಗುಳುನಗೆಯಿಂದಲೇ ಪುಷ್ಪಾಂಜಲಿಯನ್ನು ವಿರಚಿಸಿದಳು ; ಕುಂದ ಪುಷ್ಪಗಳಿಂದಲ್ಲ. ಬೆವರನ್ನು ಸುರಿಸುವ ಸ್ತನಗಳಿಂದ ಅರ್ಘ್ಯವನ್ನು ನೀಡಿದಳು, ಕಲಶೋದಕದಿಂದಲ್ಲ. ಹೀಗೆ ಮನೆಯನ್ನು ಪ್ರವೇಶಿಸಿದ ಇನಿಯನಿಗೆ ತರುಣಿ ತನ್ನದೇ ಆದ ಅವಯವಗಳಿಂದಲೇ ಸತ್ಕಾರವನ್ನು ಮಾಡಿದಳು.

### ೮೭

### ಕಾತರತೆ

**ಆಯಾತೇ ದಯಿತೇ ಮನೋರಥಶತೈರ್ನೀತ್ವಾ ಕಥಂಚಿದ್ದಿನಂ**
**ವೈದಗ್ಧ್ಯಾಪಗಮಾಜ್ಜಡೇ ಪರಿಜನೇ ದೀರ್ಘಾಂ ಕಥಾಂ ಕುರ್ವತಿ।**
**ದಷ್ಟಾಸ್ಮೀತ್ಯಭಿಧಾಯ ಸತ್ವರಪದಂ ವ್ಯಾಧೂಯ**
**ಚೀನಾಂಶುಕಂ**
**ತನ್ವಂಗ್ಯಾ ರತಿಕಾತರೇಣ ಮನಸಾ ನೀತಃ ಪ್ರದೀಪಃ ಶಮಂ ॥**

ದಯಿತೇ-ಪ್ರಾಣಪ್ರಿಯನು, ಆಯಾತೇ-(ಬಹುಕಾಲಕ್ಕೆ) ಬರಲಾಗಿ, ಮನೋರಥಶತೈಃ-(ಅವನೊಡನೆ ಕ್ರೀಡಿಸುವ) ಅನೇಕ ಕ್ರಮಗಳ ಯೋಚನೆಯಿಂದ, ಕಥಂಚಿತ್–ಬಹುಕಷ್ಟದಿಂದ, ದಿನಂ–ಹಗಲನ್ನು, ನೀತ್ವಾ-ಕಳೆದು, ವೈದಗ್ಧ್ಯಾಪಗಮಾತ್-ಹೆಚ್ಚು ಮುಂದಾಲೋಚನೆ ಇಲ್ಲದಿರುವುದರಿಂದ, ಜಡೇ–ಚಟುವಟಿಕೆಯಿಲ್ಲದ, ಪರಿಜನೇ-ಸೇವಕರು, ದೀರ್ಘಂ–ದೊಡ್ಡದಾದ, ಕಥಾಂ-ಮಾತಿನಸರಣಿಯನ್ನು, ಕುರ್ವತಿ–ಆರಂಭಮಾಡಲು, ತನ್ವಂಗ್ಯಾ–ಕೃಶಾಂಗಿಯಾದ ತರುಣಿಯಿಂದ, ದಷ್ಟಾ–ಯಾವುದೋ ಪ್ರಾಣಿಯಿಂದ ಕಚ್ಚಲ್ಪಟ್ಟವಳು, ಅಸ್ಮಿ–ಆಗಿದ್ದೇನೆ.

ಇತಿ-ಹೀಗೆ, ಅಭಿಧಾಯ-ಹೇಳಿ, ಸತ್ವರಪದಂ-ಅಲ್ಲಲ್ಲಿ ಓಡಾಡುವ ನೆಪದಿಂದ, ಚೀನಾಂಶುಕಂ-ತನ್ನ ತೆಳುವಾದ ಸೀರೆಯನ್ನು, ವ್ಯಾಧೂಯ -ಬೀಸಿ, ರತಿಕಾತರೇಣ-ಸಂಭೋಗದ ಅತಿಯಾಸೆಯುಳ್ಳ, ಮನಸಾ-ಮನಸ್ಸಿನಿಂದ, ಪ್ರದೀಪಃ-ಪ್ರಕಾಶವಾಗಿ ಉರಿಯುತ್ತಿದ್ದ ದೀಪವು, ಶಮಂ -ಶಾಂತಿಯನ್ನು, ನೀತಃ-ಹೊಂದಿಸಲ್ಪಟ್ಟಿತು.

ಪ್ರಾಣಪ್ರಿಯನು ಬಹುಕಾಲಕ್ಕೆಮನೆಗೆ ಬರಲಾಗಿ, ಅವನಬರುವಿಕೆ ಯನ್ನೇ, ನಿರೀಕ್ಷಿಸುತ್ತಿದ್ದ ತರುಣಿ ರಾತ್ರಿಯನ್ನು ಹೇಗೆ ಕಳೆಯಬೇಕೆಂಬ ನೂರಾರು ಯೋಚನೆಗಳಲ್ಲಿ ಹಗಲನ್ನು ಕಳೆದಳು. ಆದರೆ ರಾತ್ರಿ, ಮುಂದಾಲೋಚನೆಯಿಲ್ಲದ ಜಡರಾದ ಪರಿಜನರು ದೊಡ್ಡದಾಗಿ ಮಾತನಾಡಲು ಆರಂಭಿಸಲು ನಿರಾಶೆಯಿಂದ ತರುಣಿ 'ಅಯ್ಯೋ, ಏನೋ ನನ್ನನ್ನು ಕಚ್ಚಿತು' ಎಂದು ನುಡಿದು ಅಲ್ಲಲ್ಲಿ ಓಡಾಡುವ ನೆಪದಿಂದ ತನ್ನ ತೆಳುವಾದ ಸೀರೆಯ ಸೆರಗನ್ನು ಬೀಸಿ ಸಂಭೋಗದ ಆಸೆಯುಳ್ಳ ಆಕೆ ಪ್ರಕಾಶವಾಗಿ ಉರಿಯುತ್ತಿದ್ದ ದೀಪವನ್ನು ಆರಿಸಿದಳು.

## ೮೮

## ಹೊಸ ಪ್ರಪಂಚ

**ಚಿರವಿರಹಿಣೋರತ್ಯುತ್ಕಂಠಾಶ್ಲಥೀಕೃತಗಾತ್ರಯೋ**
**ರ್ನವಮಿವ ಜಗಜ್ಜಾತಂ ಭೂಯಶ್ಚಿರಾದಭಿನಂದತೋಃ।**
**ಕಥಮಿವ ದಿನೇ ದೀರ್ಘೇ ಯಾತೇ ನಿಶಾಮಧಿರೂಢಯೋಃ**
**ಪ್ರಸರತಿ ಕಥಾ ಬಹ್ವೀ ದೂನೋರ್ಯಥಾ ನ ತಥಾ ರತಿ॥**

ಅತ್ಯುತ್ಕಂಠ ಅತ್ಯಂತ ರತೀಚ್ಛೆಯಿಂದ, ಶ್ಲಥೀಕೃತ-ಸಡಿಲವಾಗುತ್ತಿರುವ, ಗಾತ್ರಯೋಃ-ಶರೀರಗಳುಳ್ಳ, ಚಿರವಿರಹಿಣೋ-ಬಹುಕಾಲದಿಂದ ಅಗಲಿದ್ದ, ಭೂಯಃ-(ಅದೃಷ್ಟವಶದಿಂದ) ಮತ್ತೆ, ಚಿರಾತ್-ಬಹುಕಾಲಕ್ಕೆ, ಅಭಿನಂದತೋಃ-ಕೂಡಿ ಸಂತೋಷಪಡುತ್ತಿರುವ, (ತರುಣೀ ತರುಣರಿಗೆ) ಜಗತ್-ಪ್ರಪಂಚವೇ, ನವಮಿವ-ಹೊಸದರಂತೆ, ಜಾತಂ-ಆಯಿತು. ದೀರ್ಘೇ-ಬಹಳವಾಗಿ ಕಾಣುತ್ತಿರುವ, ದಿನೇ-ಹಗಲು, ಕಥಮಿವ-ಬಹು ಪ್ರಯಾಸದಿಂದ, ಯಾತೇ-ಕಳೆಯಲಾಗಿ, ನಿಶಾಂ-ರಾತ್ರಿಯನ್ನು, ಅಧಿ

ರೂಢಯೋಃ-ಹೊಂದಿದ್ದ, ಮನೋ-ಆತುರರಾಗಿದ್ದ ಅವರಿಬ್ಬರಿಗೆ, ಯಥಾ-ಹೇಗೆ, ಕಥಾ-ಸಲ್ಲಾಪಾದಿಗಳು, ಬಹ್ವೀ-ಬಹಳವಾಗಿ, ಪ್ರಸರತಿ-ವಿಸ್ತಾರವಾಯಿತೋ, ತಥಾ-ಹಾಗೆ, ರತಿಃ-ಸಂಭೋಗವು, ನ ಪ್ರಸರತಿ-ಹೆಚ್ಚಾಗಲಿಲ್ಲ.

ಅತಿಶಯವಾದ ರತಿಸುಖದ ಬಯಕೆಯಿಂದ ಸಡಿಲವಾಗುತ್ತಿರುವ ದೇಹವುಳ್ಳ ಬಹುಕಾಲದಿಂದ ಅಗಲಿ ಅದೃಷ್ಟವಶದಿಂದ ಕೂಡಿ ನಲಿಯುತ್ತಿರುವ ತರುಣರಾದ ನಲ್ಲನಲ್ಲೆಯರಿಗೆ ಲೋಕವೇ ಹೊಸದಾಗಿ ತೋರಿಬಂತು. ಹಗಲು ದೀರ್ಘವಾಗಿ ಕಂಡುಬಂದು ಬಹು ಕಷ್ಟದಿಂದ ಕಳೆಯಿತು. ತುಂಬ ಕಾತರರಾಗಿದ್ದ ಅವರಿಗೆ ರಾತ್ರಿ ಸಲ್ಲಾಪಾದಿಗಳಲ್ಲಿಯೇ ಕಳೆದುಹೋಯಿತು ; ರತಿಕ್ರಿಡೆಗೆ ಅವಕಾಶ ದೊರಕಲಿಲ್ಲ.

೮೯

ಸುಳ್ಳುನೆಪದ ಸೂಚನೆ

**ತ್ವಂ ಮುಗ್ಧಾಕ್ಷಿ ವಿನೈವ ಕಂಚುಲಿಕಯಾ ಧತ್ಸೇ**
**ಮನೋಹಾರಿಣೀಂ**
**ಲಕ್ಷ್ಮೀಮಿತ್ಯಭಿಧಾಯಿನಿ ಪ್ರಿಯತಮೇ ತದ್ವೀಟಿಕಾಸಂಸ್ಪೃಶಿ ।**
**ಶಯ್ಯೋಪಾಂತನಿವಿಷ್ಟ ಸಸ್ಮಿತ ಸಖೀ ನೇತ್ರೋತ್ಸವಾನಂದಿತೋ**
**ನಿರ್ಯಾತಃ ಶನಕೈರಲೀಕವಚನೋಪನ್ಯಾಸಮಾಲೀಜನಃ ॥**

ಮುಗ್ಧಾಕ್ಷಿ-ಕಾಮಿನಿಯೇ, ತ್ವಂ ನೀನು, ಕಂಚುಲಿಕಯಾವಿನೈವ-ರವಿಕೆಯಿಲ್ಲದೆಯೇ, ಮನೋಹಾರಿಣೀಂ-ಮನಸ್ಸನ್ನು ಆಕರ್ಷಿಸುವ, ಲಕ್ಷ್ಮೀ-ಕಾಂತಿಯನ್ನು, ಧತ್ಸೇ-ಪಡೆಯುವೆ, ಇತಿ-ಹೀಗೆ ಅಭಿಧಾಯಿನಿ-ಹೇಳುತ್ತಿರುವ, ಪ್ರಿಯತಮೇ-ಪ್ರಾಣಪ್ರಿಯನಾದ ಇನಿಯನು, ತದ್ವೀಟಿಕಾ ಸಂಸ್ಪೃಶಿ ಆ ರವಿಕೆಯ ಗಂಟನ್ನು ಮುಟ್ಟಲು, ಶಯ್ಯಾ-ಹಾಸಿಗೆಯ, ಉಪಾಂತ-ಸಮೀಪದಲ್ಲಿ, ನಿವಿಷ್ಟ-ಕುಳಿತಿದ್ದ, ಸಸ್ಮಿತಃ-ಮುಗುಳ್ನಗೆಯಿಂದ ಕೂಡಿದ, ಸಖೀ-ಗೆಳತಿಯ, ನೇತ್ರೋತ್ಸವ-ಸಂತೋಷವನ್ನು ಬೀರುವ ಕಣ್ಣಿನಿಂದ, ಆನಂದಿತಃ-ಸಂತೋಷ ಹೊಂದಿದ, ಆಲೀಜನಃ-ಗೆಳತಿಯರ ಗುಂಪು, ಶನಕೈಃ-ಮೆಲ್ಲ ಮೆಲ್ಲನೆ, ಅಲೀಕವಚನೋಪನ್ಯಾಸಂ-ಸುಳ್ಳುನೆಪದ ಮಾತುಗಳನ್ನಾಡುತ್ತ, ನಿರ್ಯಾತಃ-ಹೊರಗಡೆ ಹೊರಟುಹೋಯಿತು.

'ಎಲೆ ಚೆಲುವೆ, ನೀನು ರವಿಕೆಯಿಲ್ಲದೆ ನನ್ನ ಮನಸ್ಸನ್ನು ಸೆಳೆಯುವ ಕಾಂತಿಯನ್ನು ಪಡೆಯುವೆ.' ಹೀಗೆಂದು ನುಡಿಯುತ್ತಿದ್ದ ಇನಿಯನು ಆ ರವಿಕೆಯ ಗಂಟನ್ನು ಮುಟ್ಟಲು, ಹಾಸಿಗೆಯ ಸಮೀಪದಲ್ಲಿ ಕುಳಿತು ಮುಗುಳುನಗೆಯಿಂದ ಕೂಡಿ ನಗುವನ್ನು ಬೀರುತ್ತಿದ್ದ ಕಣ್ಣುಳ್ಳ ಗೆಳತಿಯನ್ನು ನೋಡಿ ಸಂತೋಷಗೊಂಡ ಅವಳ ಗೆಳತಿಯರ ಗುಂಪು ಮೆಲ್ಲ ಮೆಲ್ಲನೆ ಸುಳ್ಳುನೆವದ ಮಾತುಗಳನ್ನಾಡುತ್ತ ಹೊರಗಡೆ ಹೊರಟು ಹೋಯಿತು.

೯೦

ಚುಂಬನ

**ಶೂನ್ಯಂ ವಾಸಗೃಹಂ ವಿಲೋಕ್ಯ ಶಯನಾದುತ್ಥಾಯ**
**ಕಿಂಚಿಚ್ಛನೈ**
**ರ್ನಿದ್ರಾವ್ಯಾಜಮುಪಾಗತಸ್ಯ ಸುಚಿರಂ ನಿರ್ವರ್ಣ್ಯ**
**ಪತ್ಯುರ್ಮುಖಂ।**
**ವಿಸ್ರಬ್ಧಂ ಪರಿಚುಂಬ್ಯ ಜಾತಪುಲಕಾಮಾಲೋಕ್ಯ**
**ಗಂಡಸ್ಥಲೀಂ**
**ಲಜ್ಜಾನಮ್ರಮುಖೀ ಪ್ರಿಯೇಣ ಹಸತಾ ಬಾಲಾ ಚಿರಂ**
**ಚುಂಬಿತಾ ॥**

ಶೂನ್ಯಂ-ಯಾರೂ ಇಲ್ಲದ, ವಾಸಗೃಹಂ ಮಲಗುವ ಮನೆಯನ್ನು, ವಿಲೋಕ್ಯ–ನೋಡಿ,ಶಯನಾತ್–ಹಾಸಿಗೆಯಿಂದ, ಕಿಂಚಿತ್ ಸ್ವಲ್ಪವಾಗಿ, ಶನೈಃ-ಮೆಲ್ಲನೆ, ಉತ್ಥಾಯ–ಮೇಲೆದ್ದು, ನಿದ್ರಾವ್ಯಾಜಂ ನಿದ್ದೆಯನೆಪವನ್ನು, ಉಪಾಗತಸ್ಯ–ಹೊಂದಿದ, ಪತ್ಯುಃ-ಪ್ರಿಯನ, ಮುಖಂ-ಮುಖವನ್ನು, ಸುಚಿರಂ-ಬಹಳ ಹೊತ್ತು ನಿರ್ವರ್ಣ್ಯ-ದೃಷ್ಟಿಸಿ ನೋಡಿ,ವಿಸ್ರಬ್ಧಂ–ಧೈರ್ಯವಾಗಿ, ಪರಿಚುಂಬ್ಯ ಚುಂಬನಮಾಡಿ, ಜಾತಪುಲಕಾಂ-ಉಂಟಾದ ರೋಮಾಂಚವುಳ್ಳ, ಗಂಡಸ್ಥಲೀಂ-ಗಂಡನ ಕಪೋಲ ಪ್ರದೇಶವನ್ನು, ಆಲೋಕ್ಯ-ನೋಡಿ, ಲಜ್ಜಾ-ನಾಚಿಕೆಯಿಂದ, ನಮ್ರ-ಬಾಗಿದ, ಮುಖೀ ಮುಖವುಳ್ಳ, ಬಾಲಾ-ಬಾಲೆಯು, ಹಸತಾ-ನಗುತ್ತಿದ್ದ,ಪ್ರಿಯೇಣ-ಇನಿಯನಿಂದ, ಚಿರಂ-ಬಹಕಾಲ, ಚುಂಬಿತಾ-ಮುತ್ತಿಡಲ್ಪಟ್ಟಳು.

ಮಲಗುವ ಮನೆಯಲ್ಲಿ ಯಾರೂ ಇಲ್ಲದುವನ್ನು ನೋಡಿ, ಬಾಲೆಯು ಹಾಸಿಗೆಯಿಂದ ಮೆಲ್ಲನೆ ಮೇಲೆದ್ದು ನಿದ್ದೆಯ ನೆಪದಿಂದ ಮಲಗಿದ್ದ ಇನಿಯನ ಮುಖವನ್ನು ಬಹುಕಾಲ ನಟ್ಟ ನೋಟದಿಂದ ನೋಡಿ ಧೈರ್ಯದಿಂದ ಅದನ್ನು ಮುತ್ತಿಟ್ಟಳು. ಆಗ ತನ್ನ ಇನಿಯನ ಕಪೋಲದಲ್ಲಿ ರೋಮಾಂಚವುಂಟಾದುದನ್ನು ಕಂಡು ಆಕೆ ನಾಚಿಕೆಯಿಂದ ತಲೆ ತಗ್ಗಿಸಲು ನಗುತ್ತ ಅವಳ ಪ್ರಿಯತಮನು ಆ ಬಾಲೆಯನ್ನು ಬಹುಕಾಲ ಮುತ್ತಿಟ್ಟನು.

೯೧

ರತಿಕೇಳಿ

**ಗಾಢಾಲಿಂಗನ ವಾಮನೀಕೃತಕುಚಪ್ರೋದ್ಭೂತ**
**ರೋಮೋದ್ಗಮಾ**
**ಸಾಂದ್ರಸ್ನೇಹರಸಾತರೇಕವಿಗಲಚ್ಛ್ರೀಮನ್ನಿತಂಬಾಂಬರಾ ।**
**ಮಾ ಮಾ ಮಾನದ ಮಾತಿ ಮಾಮಲಮಿತಿ**
**ಕ್ಷಾಮಾಕ್ಷರೋಲ್ಲಾಪಿನೀ**
**ಸುಪ್ತಾ ಕಿಂ ನು ಮೃತಾನು ಕಿಂ ಮನಸಿ ಕಿಂ ಲೀನಾ ವಿಲೀನಾ**
**ನು ಕಿಂ ॥**

ಗಾಢ ಬಿಗಿಯಾಗಿ, ಆಲಿಂಗನ-ಅಪ್ಪಿಕೊಳ್ಳುವುವರಿಂದ, ವಾಮನೀಕೃತ-ಸ್ವಲ್ಪಮಟ್ಟಿಗೆ ಸಂಕೋಚ (ಕಿರಿದಾಗಿ) ಮಾಡಲ್ಪಟ್ಟ, ಕುಚ-ಸ್ತನಗಳಲ್ಲಿ, ಪ್ರೋದ್ಭೂತ-ಚೆನ್ನಾಗಿ ಕಾಣಿಸಿಕೊಂಡ, ರೋಮೋದ್ಗಮಾ-ಪುಲಕಗಳನ್ನುಳ್ಳ, ಸಾಂದ್ರ-ದಟ್ಟವಾದ, ಸ್ನೇಹರಸ ಪ್ರೀತಿಯ, ಅತಿರೇಕ-ಅತಿಶಯದಿಂದ, ವಿಗಲತ್-ಜಾರುತ್ತಿರುವ, ಶ್ರೀಮತ್-ಸುಂದರವಾದ, ನಿತಂಬ-ಕಟಿಪ್ರದೇಶದ, ಅಂಬರಾ ಬಟ್ಟೆಯುಳ್ಳ ಆ ನನ್ನ ಪ್ರಿಯತಮೆ, ಹೇ ಮಾನದ-ಮಾನವನ್ನು ಕಳೆಯುವವನೆ, ಮಾ ಮಾ-ಬೇಡ ಬೇಡ, ಮಾಂ-ನನ್ನನ್ನು, ಅಲಂ-ಪೀಡಿಸುವುದು ಸಾಕು, ಅತಿ-ಹೆಚ್ಚಾಗಿ, ಮಾ-ಬೇಡ. ಇತಿ-ಹೀಗೆಂದು, ಕ್ಷಮಾಕ್ಷರೋಲ್ಲಾಪಿನೀಂ-ಅರ್ಧಾಕ್ಷರಗಳಿಂದ ಮಾತನಾಡುತ್ತ, ಕಿಂ ಸುಪ್ತಾ-ಮಲಗಿದಳೋ ಏನೋ! ಕಿಂ ನು ಮೃತಾ-ಮೃತಳಾದಳೋ ಏನೋ! ವಾ-ಇಲ್ಲವೆ, ಮನಸಿ-ಮನಸ್ಸಿನಲ್ಲಿ,

ಲೀನಾ ಕಿಂ-ಅಡಗಿದಳೋ, ವಾ-ಇಲ್ಲವೇ, ವಿಲೀನಾ ಕಿಂ ನು-ಕರಗಿದಳೋ ಏನೋ!

ಪ್ರೇಮದ ಭರದಿಂದ ಪ್ರಿಯತಮೆಯನ್ನು ಬಿಗಿಯಾಗಿ ಅಪ್ಪಿಕೊಳ್ಳಲು ಸ್ವಲ್ಪ ಕಿರಿದಾದ ಸ್ತನಗಳಲ್ಲಿ ಪುಳಕುಗಳು ಚೆನ್ನಾಗಿ ಕಾಣಿಸಿಕೊಂಡವು. ಪ್ರೇಮದ ಅತಿಶಯದಿಂದ ಸುಂದರವಾದ ಕಟಿಪ್ರದೇಶದ ಬಟ್ಟೆ ಜಾರಿತು. ಆಗ ನನ್ನಸಲ್ಲೆ 'ಎಲೆ ಮಾನಾಪಹಾರಿ, ಬೇಡ ಬೇಡ. ನೀನು ನನ್ನನ್ನು ಪೀಡಿಸುವುದು ಸಾಕು. ಇನ್ನು ಹೆಚ್ಚಾಗಿ ಬೇಡ.' ಎಂದು ಪರ್ಯಾಕುಲೆಯಾಗಿ ಅರ್ಧೋಕ್ತಿಯಲ್ಲಿ ಮಾತನಾಡುತ್ತ ಮಲಗಿದಳೋ ಏನೋ! ಮೃತಳಾದಳೋ ಏನೋ! ಇಲ್ಲವೆ ನನ್ನ ಮನಸ್ಸಿನಲ್ಲಿ ಅಡಗಿದಳೊ ಮಾಯವಾದಳೊ!

## ೯೨

## ವಿಪರೀತ ರತಿಕ್ರೀಡೆ

**ಗಾಢಾಶ್ಲೇಷವಿಶೀರ್ಣ ಚಂದನರಜಃ ಪುಂಜಪ್ರಕರ್ಷಾದಿಯಂ**
**ಶಯ್ಯಾ ಸಂಪ್ರತ ಕೋಮಲಾಂಗಿ ಪರುಷೇತ್ಯಾರೋಪ್ಯ ಮಾಂ**
**ವಕ್ಷಸಿ ।**
**ಗಾಢೌಷ್ಠಗ್ರಹಪೂರ್ವಮಾಕುಲತಯಾ ಪಾದಾಗ್ರಸಂದಂಶಕೇ**
**ನಾಕೃಷ್ಯಾಂಬರಮಾತ್ಮನೋ ಯದುಚಿತಂ ಧೂರ್ತೇನ**
**ತತ್ಪ್ರಸ್ತುತಂ ॥**

ಹೇ ಕೋಮಲಾಂಗಿ-ಎಲೌ ಮೃದು ದೇಹವುಳ್ಳವಳೇ, ಗಾಢ-ಗಟ್ಟಿಯಾದ, ವಿಶೀರ್ಣ-ಉದುರಿದ, ಚಂದನ-ಗಂಧದ, ರಜಃಪುಂಜ-ದೂಳಿನ ರಾಶಿಯ, ಪ್ರಕರ್ಷಾತ್-ಆಧಿಕ್ಯದಿಂದ, ಇಯಂ-ಈ, ಶಯ್ಯಾ ಹಾಸಿಗೆ, ಸಂಪ್ರತಿ-ಈಗ, ಪುರುಷಾ-ಕಠಿನವಾಗಿದೆ, ಇತಿ-ಹೀಗೆಂದು, ಮಾಂ-ನನ್ನನ್ನು ವಕ್ಷಸಿ-ತನ್ನ ಎದೆಯಮೇಲೆ, ಆರೋಪ್ಯ ಏರಿಸಿಕೊಂಡು, ಗಾಢ-ಗಟ್ಟಿಯಾಗಿ, ಓಷ್ಠ-ನನ್ನ ತುಟಿಯ, ಗ್ರಹಪೂರ್ವಂ-ಕಚ್ಚುವುದರ ಮೂಲಕ, ಆಕುಲತಯಾ-ಮನಸ್ಸನ್ನು ಚಂಚಲಗೊಳಿಸುವುದರಿಂದ, ಪಾದಾಗ್ರಸಂದಂಶಕೇನ-ತನ್ನ ಕಾಲಿನ ತುದಿಬೆರಳನ್ನು ಒಟ್ಟುಗೂಡಿಸಿದ ಯಂತ್ರಕ್ರಮದಿಂದ, ಆತ್ಮನಃ-ನನ್ನ, ಅಂಬರಂ-ಸೀರೆಯನ್ನೂ, ಆಕೃಷ್ಯ-

ಎಳೆದು, ಧೂರ್ತೇನ-ಒರಟಾದ ಇನಿಯನಿಂದ, ಯತ್-ಯಾವಕಾರ್ಯವು, ಉಚಿತಂ-ನ್ಯಾಯವೆನಿಸಿತೋ, ತತ್-ಅದು,ಪ್ರಸ್ತುತಂ-ಆಚರಿಸಲ್ಪಟ್ಟಿತು.

'ಎಲೈ ಕೋಮಲೆ, ಬಿಗಿಯಾದ ಅಪ್ಪುಗೆಯಿಂದ ಉದುರಿದ ಅತಿಶಯವಾದ ಚಂದನದ ಧೂಳಿನಿಂದ ಈ ಹಾಸಿಗೆ ಕಠಿಣವಾಗಿದೆ' ಹೀಗೆಂದು ನುಡಿದು ಪ್ರಿಯತಮನು ನನ್ನನ್ನು ತನ್ನೆದೆಯ ಮೇಲೆ ಏರಿಸಿಕೊಂಡು ನನ್ನ ತುಟಿಯನ್ನು ಕಚ್ಚಿ ಆ ಮೂಲಕ ನನ್ನ ಮನಸ್ಸನ್ನು ಚಂಚಲಗೊಳಿಸಿ ತನ್ನ ಕಾಲಿನ ತುದಿಬೆರಳನ್ನು ಒಟ್ಟುಗೂಡಿಸಿ ಅದನ್ನು ಯಂತ್ರದಂತೆ ಮಾಡಿ ನನ್ನ ಸೀರೆಯನ್ನು ಸೆಳೆದು ಆ ಕಾಲಕ್ಕೆ ಉಚಿತ ಕಾರ್ಯವನ್ನು ಆಚರಿಸಿದನು.

೯೩

## ವಿಪರೀತ ರತಿಕ್ರೀಡೆ

**ಸೈವಾಹಂ ಪ್ರಮದಾ ನೃಣಾಮಧಿಗತಾವೇತೌ ಚ ತೌ ನೂಪುರಾ**
**ವೇಷಾಸ್ಮಾಕಮವೃತ್ತಿರೇವ ಸಹಜವ್ರೀಡಾಧನಃ ಸ್ತ್ರೀಜನಃ ।**
**ಇತ್ಥಂ ಲಜ್ಜಿತಯಾ ಸ್ಮೃತೇರುಪಗಮೇ ಮುಕ್ತ್ವಾ ತನುಂ ಸಂಭ್ರಮಾ**
**ತ್ಪುಂಭಾವಃ ಪ್ರಥಮಂ ರತವ್ಯತಿಕರೇ ಮುಕ್ತಸ್ತತೋ ವಲ್ಲಭಃ ॥**

ಅಹಂ-ನಾನು, ಸಾ ಏವಪ್ರಮದಾ ಅದೇ ಹೆಂಗಸು, ಏತೌ-ಈ ನೂಪುರೌ-ಬಳೆಗಳೇ, ತೌ-ಅವು, ನೃಣಾಂ-ಮಾನವಸಾಮಾನ್ಯರಿಂದ, ಅಧಿಗತೌ-ತಿಳಿಯಲ್ಪಟ್ಟವುಗಳು, ಏಷಾ-ಈ, ಅವೃತ್ತಿಃಏವ ವಿಕಾರ ಹೊಂದಿರುವುದೇ, ಅಸ್ಮಾಕಂ-ನಮ್ಮ (ಸ್ವಭಾವವು), ಸ್ತ್ರೀಜನಃ ಹೆಂಗಸರು ಸಹಜ-ಸ್ವಭಾವವಾದ, ವ್ರೀಡಾ-ನಾಚಿಕೆಯೇ. ಧನಃ-ನಿಧಿಯನ್ನಾಗಿ ಉಳ್ಳವರು, ಇತ್ಥಂ-ಹೀಗೆ, ಸ್ಮೃತೇಃ ಸ್ಮರಣೆಯು, ಉಪಗಮೇ-ಬಂದೊದಗಿದಾಗ, ಲಜ್ಜಿತಯಾ-ನಾಚಿಕೆಯ ಸ್ವಭಾವದಿಂದ, ತನುಂ-ತನ್ನ ಶರೀರವನ್ನು, ಮುಕ್ತ್ವಾ-ತಿಳಿದು, ರತಿವ್ಯತಿಕರೇ-ಪುರುಷಾಯಿತ ರತಿಸುಖದ ಸಂಬಂಧದಲ್ಲಿ, ಪ್ರಥಮಂ-ಮೊದಲು,ಪುಂಭಾವಃ-ತಾನು ಪುರುಷನೆಂಬ ಭಾವನೆ, ಮುಕ್ತಃ-ಬಿಡಲ್ಪಟ್ಟಿತು. ತತಃ-ಅನಂತರ, ವಲ್ಲಭಃ-ಇನಿಯನು, ಮುಕ್ತಃ-ನನ್ನಿಂದ ದೂರವಾಗಲ್ಪಟ್ಟನು.

'ನಾನೇ ಆ ಹೆಂಗಸು, ಇವೇ ಆ ಬಳೆಗಳು, ಮಾನವಸಹಜವಾದ ವಿಕಾರವನ್ನು ಹೊಂದುವುದೇ ನಮ್ಮ ಸ್ವಭಾವ, ಹೆಂಗಸರಿಗೆ ನಾಚಿಕೆಯೇ ಧನ' ಈ ಅಂಶಗಳು ನೆನಪಿಗೆ ಬಂದೊಡನೆಯೇ ನಾಚಿಕೆಯಿಂದ ಪುರುಷಾಯಿತ ಬಂಧದ ರತಿಸುಖದ ಅಂತ್ಯದಲ್ಲಿ ನಾನು ಪುರುಷನೆಂಬ ಭಾವವನ್ನು ತೊರೆದೆನು. ಕೊಡಲೇ ನನ್ನ ಇನಿಯನು ನನ್ನಿಂದ ದೂರವಾದನು

೯೪

ಸಂಭೋಗ ವಿರತಿ

**ಕರಕಿಸಲಯಂ ಧೂತ್ವಾ ಧೂತ್ವಾ ವಿಮಾರ್ಗತಿ ವಾಸಸೀ**
**ಕ್ಷಿಪತಿಸುಮನೋಮಾಲಾಶೇಷಂ ಪ್ರದೀಪಶಿಖಾಂ ಪ್ರತಿ।**
**ಸ್ಥಗಯತಿ ಮುಹುಃ ಪತ್ಯುರ್ನೇತ್ರೇ ವಿಹ್ಯ ಸಮಾಕುಲಾ**
**ಸುರತವಿರತಾ ರಮ್ಯಾ ತನ್ವೀ ಮುಹುರ್ಮುಹುರೀಕ್ಷತೇ ॥**

ಸುರತವಿರತಾ-ಸಂಭೋಗ ಸೌಖ್ಯವನ್ನು ಪೂರ್ಣವಾಗಿ ಅನುಭವಿಸಿದ, ರಮ್ಯಾ-ಸುಂದರಿಯಾದ, ತನ್ವೀ-ಕೃಶಾಂಗಿಯಾದ ತರುಣಿ, ಕರಕಿಸಲಯಂ-ಚಿಗುರಿನಂತಿರುವ ತನ್ನ ಕೈಯನ್ನು, ಧೂತ್ವಾಧೂತ್ವಾ-ಅಲ್ಲಲ್ಲಿ ಅಲುಗಿಸುತ್ತ, ವಾಸಸೀ-ತನ್ನ ಬಟ್ಟೆಗಳನ್ನು, ವಿಮಾರ್ಗತಿ-ಹುಡುಕುತ್ತಾಳೆ. ಸುಮನೋಮಾಲಾ-ಪುಷ್ಪಮಾಲೆಯ, ಶೇಷಂ-ಬಿದ್ದಿರುವ ಅವಶೇಷವನ್ನು, ಪ್ರದೀಪಶಿಖಾಂಪ್ರತಿ ಉರಿಯುವ ದೀಪದ ಕಡೆಗೆ, ಕ್ಷಿಪತಿ-ಎಸೆಯುತ್ತಾಳೆ. ವಿಹಸ್ಯ-ನಕ್ಕು, ಸಮಾಕುಲಾ-ಕೋಪಗ್ರಸ್ತಳಾದಂತೆ ನಟಿಸಿ, ಪತ್ಯುಃ-ಇನಿಯನ, ನೇತ್ರೇ-ಎರಡು ಕಣ್ಣುಗಳನ್ನೂ, ಮುಹುಃ-ಬಾರಿಬಾರಿಗೂ, ಸ್ಥಗಯತಿ-ಮುಚ್ಚುತ್ತಾಳೆ (ಮತ್ತು), ಮುಹುಃ-ಬಾರಿಬಾರಿಗೂ, ಈಕ್ಷತೇ-ಪ್ರಿಯನನ್ನೇ ನೋಡುವಳು.

ಸಂಭೋಗ ಸುಖವನ್ನು ಪೂರ್ಣವಾಗಿ ಅನುಭವಿಸಿದ ಚೆಲುವೆಯೂ ಕೃಶಾಂಗಿಯೂ ಆದ ತರುಣಿ ಚಿಗುರಿನಂತಿರುವ ಕೈಯನ್ನು ಅಲ್ಲಲ್ಲಿ ತಿರುಗಿಸುತ್ತ ತನ್ನ ಬಟ್ಟೆಗಳನ್ನು ಹುಡುಕುವಳು. ಕೆಳಗೆ ಬಿದ್ದಿರುವ ಹೂಮಾಲೆಯ ಚೂರನ್ನು ಉರಿಯುತ್ತಿರುವ ದೊಡ್ಡದೀಪದ ಕಡೆಗೆ ಎಸೆಯುವಳು. ನಕ್ಕು ಕೋಪವನ್ನು ನಟಿಸಿ ತನ್ನ ಇನಿಯನ ಎರಡು ಕಣ್ಣುಗಳನ್ನು ಬಾರಿಬಾರಿಗೂ ಮುಚ್ಚುವಳು; ಮತ್ತೆ ಮತ್ತೆ ಅವನನ್ನು ನೋಡುವಳು.

೯೫
ಇನಿವಾತು

**ಸ್ವಂ ದೃಷ್ಟ್ವಾ ಕರಜಕ್ಷತಂ ಮಧುಮದಕ್ಷೀಬಾ**
**ವಿಚಾರ್ಯೇರ್ಷ್ಯಯಾ**
**ಗಚ್ಛಂತೀ ಕ್ವ ನು ಗಚ್ಛಸೀತಿ ವಿಧೃತಾ ಬಾಲಾ ಪಟಾಂತೇ**
**ಮಯಾ।**
**ಪ್ರತ್ಯಾವೃತ್ತಮುಖೀ ಸಬಾಷ್ಪನಯನಾ ಮಾಂ ಮುಂಚ**
**ಮುಂಚೇತಿ ಸಾ**
**ಕೋಪಪ್ರಸ್ಫುರಿತಾಧರಾ ಯದವದತ್ತತ್ಕೇನ ವಿಸ್ಮಾರ್ಯತೇ ||**

ಸ್ವಂ-ತನ್ನದೇ ಆದ, ಕರಜಕ್ಷತ-ಉಗುರಿನ ಗಾಯವನ್ನು, ದೃಷ್ಟ್ವಾ-ನೋಡಿ, ಮಧುಮದಕ್ಷೀಬಾವಿಚಾರ್ಯ-ಸಂಭೋಗಾಂತದಲ್ಲಿ ಮಾಡುವ ಮದ್ಯಪಾನದಿಂದ ಮತ್ತಳಾಗಿ ವಿಚಾರಮಾಡದೆ, ಈರ್ಷ್ಯಯಾ ಅಸೂಯೆಯಿಂದ, ಗಚ್ಛಂತೀ-ಹೋಗುತ್ತಿದ್ದ, ಬಾಲಾ-ಹುಡುಗಿಯು, ಮಯಾ-ನನ್ನಿಂದ,ಪಟಾಂತೇ-ಸೆರಗಿನಲ್ಲಿ,ಕ್ವ ನು ಗಚ್ಛಸಿ-ಎಲ್ಲಿಗೆ ಹೋಗುತ್ತೀಯೆ, ಇತಿ-ಹೀಗೆನ್ನುತ್ತಾ, ವಿಧೃತಾ-ಹಿಡಿಯಲ್ಪಟ್ಟಳು. ಪ್ರತ್ಯಾವೃತ್ತಮುಖೀ-ಹಿಂದಿರುಗಿಸಿದ ಮುಖವುಳ್ಳ, ಸಾ ಅವಳು, ಸಬಾಷ್ಪನಯನಾ-ಕಣ್ಣೀರಿನಿಂದ ಕೂಡಿದವಳಾಗಿ, ಮಾಂ-ನನ್ನನ್ನು, ಮುಂಚ-ಬಿಡು, ಇತಿ-ಹೀಗೆನ್ನುತ್ತಾ, ಕೋಪ-ಕೋಪದಿಂದ, ಪ್ರಸ್ಫುರಿತ-ಅದುರುತ್ತಿರುವ, ಅಧರಾ-ತುಟಿಗಳುಳ್ಳವಳಾಗಿ, ಯತ್-ಯಾವ ಮಾತುಗಳನ್ನು, ಅವದತ್-ಹೇಳಿದಳೋ, ತತ್-ಅದು, ಕೇನ-ಯಾರಿಂದ ವಿಸ್ಮಾರ್ಯತೇ-ಮರೆಯಲ್ಪಡುತ್ತದೆ.

ಸಂಭೋಗಕಾಲದಲ್ಲಿ ತನ್ನ ಪ್ರಿಯತಮನಿಗೆ ತಾನು ಮಾಡಿದ ಉಗುರಿನ ಗಾಯವನ್ನು ನೋಡಿ, ಸಂಭೋಗದ ಕೊನೆಯಲ್ಲಿ ಮಾಡಿದ ಮಧುಪಾನದಿಂದ ಮತ್ತಳಾಗಿ ವಿಚಾರಮಾಡದೆ ಇನಿಯನಲ್ಲಿ ಅಸೂಯೆಯನ್ನು ವ್ಯಕ್ತಪಡಿಸಿ ಹೋಗುತ್ತಿದ್ದ ಬಾಲೆಯನ್ನು ಕಂಡು ‘ನೀನೆಲ್ಲಿಗೆ ಹೋಗುವೆ ?’ ಎಂದು ಅವಳ ಸೆರಗನ್ನು ಹಿಡಿದು ನಿಲ್ಲಿಸಿದನು. ತಿರುಗಿದ ಮುಖವುಳ್ಳ ಅವಳು ಕಣ್ಣೀರಿನಿಂದ ಕೂಡಿ ‘ನನ್ನನ್ನು ಬಿಡು, ಬಿಡು.’

ಎಂದು ಕೋಪಗೊಂಡು ಅದುರುವ ತುಟಿಯಿಂದ ನುಡಿವ ನುಡಿಯನ್ನು ಮರೆಯಲು ಹೇಗೆ ತಾನೆ ಸಾಧ್ಯ ?

೯೬

ಆನಂದಾನುಭವ

**ಮ್ಲಾನಂ ಪಾಂಡು ಕೃಶಂ ವಿಯೋಗವಿಧುರಂ ಲಂಬಾಲಕಂ ಸಾಲಸಂ**
**ಭೂಯಸ್ತತ್ಕ್ಷಣಜಾತಕಾಂತಿರಭಸಪ್ರಾಪ್ತೇ ಮಯಿಪ್ರೋಷಿತೇ**
**ಸಾಟೋಪಂ ರತಿಕೇಲಿಕಾಲಸರಸಂ ರಮ್ಯಂ ಕಿಮಪ್ಯಾದರಾತ್**
**ಯತ್ಪೀತಂ ಸುತನೋರ್ಮಯಾ ವದನಕಂ ವಕ್ತುಂ ನ ತತ್ಪಾರ್ಯತೇ ||**

ಮ್ಲಾನಂ-ಬಾಡಿ, ಪಾಂಡು-ಬಿಳುಪಾಗಿ, ಕೃಶಂ ತೆಳುವಾಗಿ, ವಿಯೋಗವಿಧುರಂ-ಬಹುಕಾಲದ ಅಗಲಿಕೆಯಿಂದ ದುಃಖಗೊಂಡು, ಲಂಬಾಲಕಂ-ಜೋತು ಬಿದ್ದ ಮುಂಗುರುಳುಳ್ಳದ್ದಾಗಿ, ಸಾಲಸಂ-ಆಲಸ್ಯದಿಂದ ಕೂಡಿ, ಪ್ರೋಷಿತೇ-ದೇಶಾಂತರಕ್ಕೆ ಹೋಗಿದ್ದ, ಮಯಿ-ನಾನು, ರಭಸಪ್ರಾಪ್ತೇ–ಅಕಸ್ಮಾತ್ತಾಗಿ ಬರಲು, ಭೂಯಃ-ಮತ್ತೆ, ತತ್ಕ್ಷಣ-ಕೂಡಲೆ, ಜಾತ-ಉಂಟಾದ, ಕಾಂತಿ-ಕಾಂತಿಯುಳ್ಳದ್ದಾಗಲು, ಸಾಟೋಪಂ ಕೋಪದಿಂದ ಕೂಡಿದ್ದ. ರತಿಕೇಳಿ-ಭೋಗಕ್ರೀಡಾದಿಗಳ, ಕಾಲ ಸಮಯದಲ್ಲಿ, ಸರಸಂ-ಪ್ರಸನ್ನತೆಯಿಂದ ವಿಕಾಸಹೊಂದಿದ್ದ, ರಮ್ಯಂ-ಮನೋಹರವಾಗಿದ್ದ, ಸುತನೋಃ-ಸುಂದರಾಂಗಿಯಾದ ನಲ್ಲೆಯ, ಯತ್-ಯಾವ, ವದನಕಂ–ಮುಖವು, ಆದರಾತ್ ಪ್ರೇಮದಿಂದ, ಮಯಾ-ನನ್ನಿಂದ ಪೀತಂ-ಕುಡಿಯಲ್ಪಟ್ಟಿತೋ, ತತ್-ಅದನ್ನು, ಕಿಮಪಿ-ಸ್ವಲ್ಪವಾಗಿಯೂ, ವಕ್ತುಂ-ಹೇಳುವುದಕ್ಕೆ, ನ ಪಾರ್ಯತೇ ಸಾಧ್ಯವಾಗುವುದಿಲ್ಲ.

ಅಗಲಿಕೆಯ ದುಃಖದಿಂದ ಬಾಡಿ ಬಿಳುಪಿಟ್ಟು, ಜೋಲಾಡುವ ಮುಂಗುರುಳಿನಿಂದ ಕೂಡಿ ಅಲಸಗೊಂಡಿದ್ದ ನನ್ನ ಪ್ರಿಯತಮೆಯ ಮುಖ, ದೂರದೇಶಕ್ಕೆ ಪ್ರಯಾಣಮಾಡಿದ ನಾನು ಅಕಸ್ಮಾತ್ತಾಗಿ ಬರಲು ಕಾಂತಿಯಿಂದ ಕಳೆಯೇರಿತು ; ಪ್ರಣಯಕೋಪದಿಂದ ಕೂಡಿತು. ಆದರೆ ರತಿಕೇಳಿಯ ಸಮಯದಲ್ಲಿ ಪ್ರಸನ್ನತೆಯಿಂದ ಕೂಡಿ ಅರಳಿ ಮನೋಹರ

ವಾದ ಆ ಮುಖವನ್ನು ಪ್ರೇಮದಿಂದ ಮುತ್ತಿಟ್ಟೆನು ಆ ಸಮಯದಲ್ಲಿ ನಾನು ಅನುಭವಿಸಿದ ಆನಂದವನ್ನು ಮಾತಿನಿಂದ ವರ್ಣಿಸಲು ಹೇಗೆ ತಾನೆ ಸಾಧ್ಯ ?

೯೭

ಲಜ್ಜೆ

**ದಂಪತ್ಯೋರ್ನಿಶಿ ಜಲ್ಪತೋರ್ಗೃಹಶುಕೇನಾಕರ್ಣಿತಂ ಯದ್ವಚಃ**
**ತತ್ಪ್ರಾತರ್ಗುರು ಸನ್ನಿಧೌ ನಿಗದತಃ ಶ್ರುತ್ವೈವ ತಾರಂ ವಧೂಃ।**
**ಕರ್ಣಾಲಂಬಿತ ಪದ್ಮರಾಗಶಕಲಂ ವಿನ್ಯಸ್ಯ ಚಂಚ್ವಾಃ ಪುರೋ**
**ವ್ರೀಡಾರ್ತಾ ಪ್ರಕರೋತಿ ದಾಡಿಮಫಲವ್ಯಾಜೇನ ವಾಗ್ಬಂಧನಮ್ ||**

ನಿಶಿ-ರಾತ್ರಿಯಲ್ಲಿ, ಜಲ್ಪತೋಃ-ತಾವೇತಾವಾಗಿ ಹರಟುತ್ತಿದ್ದ, ದಂಪತ್ಯೋಃ-ನಲ್ಲೆನಲ್ಲೆಯರ, ಯತ್-ಯಾವ, ವಚಃ-ಮಾತು, ಗೃಹಶುಕೇನ-ಮನೆಯ ಸಾಕಿದ ಗಿಳಿಯಿಂದ, ಆಕರ್ಣಿತಂ-ಕೇಳಲ್ಪಟ್ಟಿತೋ, ತತ್-ಆ ಮಾತನ್ನು, ಪ್ರಾತಃ-ಬೆಳಗಾದ ಮೇಲೆ, ಗುರುಸನ್ನಿಧೌ-ಗುರು ಹಿರಿಯರಾದ ಅತ್ತೆಮಾವಂದಿರ ಸಮೀಪದಲ್ಲಿ, ತಾರಂ ಗಟ್ಟಿಯಾಗಿ, ನಿಗದತಃ-ಹೇಳುತ್ತಿರುವುದನ್ನು, ಶ್ರುತ್ವೈವ-ಕೇಳಿಯೇ, ವಧೂಃ ತರುಣಿಯು, ಕರ್ಣ-ಕಿವಿಯಲ್ಲಿ, ಆಲಂಬಿತ ತೂಗಾಡುತ್ತಿರುವ, ಪದ್ಮರಾಗ ಶಕಲಂ-ಪದ್ಮರಾಗದ ಮಣಿಯನ್ನು, ದಾಡಿಮಫಲ-ದಾಳಿಂಬೆ ಹಣ್ಣಿನ ಕಾಳಿನ, ವ್ಯಾಜೇನ-ನೆಪದಿಂದ, ಚಂಚ್ವಾಃ-ಗಿಳಿಯ ಕೊಕ್ಕಿನ, ಪುರಃ ಮುಂಭಾಗದಲ್ಲಿ, ವಿನ್ಯಸ್ತ-ಇಟ್ಟು, ವ್ರೀಡಾರ್ತಾ-ನಾಚಿಕೆಯಿಂದ ಕೂಡಿದವಳಾಗಿ, ವಾಗ್ಬಂಧನಮ್-ಮಾತಿನ ಮುಚ್ಚುವಿಕೆಯನ್ನು, ಪ್ರಕರೋತಿ-ಮಾಡುತ್ತಾಳೆ.

ರಾತ್ರಿಯಲ್ಲಿ ನಲ್ಲನಲ್ಲೆಯರು ತಾವೇತಾವಾಗಿ ಹರಟಿದ ಹರಟೆಯನ್ನು ಸಾಕಿದ ಗಿಳಿ ಕೇಳಿ, ಆ ಮಾತನ್ನು ಬೆಳಗಾದ ಮೇಲೆ ಗುರುಹಿರಿಯರ ಸನ್ನಿಧಿಯಲ್ಲಿ ಗಟ್ಟಿಯಾಗಿ ಹೇಳುತ್ತಿದ್ದುದನ್ನು ಕೇಳಿದ ತರುಣಿ, ನಾಚಿಕೆಯಿಂದ ಕೂಡಿ ತನ್ನ ಕಿವಿಯಲ್ಲಿದ್ದ ಪದ್ಮರಾಗಮಣಿಯನ್ನು ದಾಳಿಂಬೆ ಹಣ್ಣಿನ ಕಾಳಿನ ನೆವದಿಂದ ಅದರ ಕೊಕ್ಕಿನಲ್ಲಿಟ್ಟು ಮಾತನ್ನು ನಿಲ್ಲಿಸಿದಳು.

೯೮

ಸಂಭೋಗಾವಿಷ್ಕರಣ

**ಕಾಂತೇ ತಲ್ಪಮುಪಾಗತೇ ವಿಗಲಿತಾ ನೀವೀ ಸ್ವಯಂ ಬಂಧನಾತ್**
**ವಾಸೋ ವಿಶ್ಲಥಮೇಖಲಾಗುಣಧೃತಂ ಕಿಂಚಿನ್ನಿತಂಬೇ ಸ್ಥಿತಂ।**
**ಏತಾವತ್ಸಖಿ ವೇದ್ಮಿ ಸಾಂಪ್ರತಮಹಂ ತಸ್ಯಾಂಗಸಂಗೇ ಪುನಃ**
**ಕೋಽಯಂ ಕಾಸ್ಮಿ ರತಂ ನು ವಾ ಕಥಮಿತಿ ಸ್ವಲ್ಪಾಪಿ ಮೇ ನ ಸ್ಮೃತಿಃ ॥**

ಕಾಂತೇ-ನಲ್ಲನು, ತಲ್ಪಂ ಹಾಸಿಗೆಯನ್ನು ಕುರಿತು, ಉಪಾಗತೇ-ಬರಲು, ನೀವೀ-ಸೊಂಟದ ಸೀರೆಯ ಗಂಟು, ಸ್ವಯಂ ತಾನಾಗಿಯೇ, ಬಂಧನಾತ್-ಕಟ್ಟಿನ ಬಿಗಿತದಿಂದ, ವಿಗಲಿತಾ-ಜಾರಿತು. ವಾಸಃ-ಉಟ್ಟಿದ್ದ ಬಟ್ಟೆಯಾದರೋ, ವಿಶ್ಲಥ-ಸಡಿಲಿದ, ಮೇಖಲಾ-ಡಾಬಿನ, ಗುಣ-ದಾರದಿಂದ, ಧೃತಂ-ಧರಿಸಲ್ಪಟ್ಟದ್ದಾಗಿ, ಕಿಂಚಿತ್-ಸ್ವಲ್ಪಮಾತ್ರ, ನಿತಂಬೇ-ಪೃಷ್ಠದ ಮೇಲೆ, ಸ್ಥಿತಂ-ನಿಂತಿತು. ಸಖಿ-ಎಲೈ ಗೆಳತಿ, ಅಹಂ-ನಾನು, ಸಾಂಪ್ರತಂ-ಈಗ, ಏತಾವತ್-ಇಷ್ಟನ್ನು ಮಾತ್ರ, ವೇದ್ಮಿ-ತಿಳಿದವಳಾಗಿದ್ದೇನೆ, ತಸ್ಯ-ಆ ನನ್ನ ಪ್ರಿಯನ, ಅಂಗಸಂಗೇ-ಅಂಗಾಂಗಗಳ ಸಂಬಂಧವುಂಟಾದೊಡನೆಯೇ, ಪುನಃ-ಮತ್ತೆ, ಅಯಂ-ಆ ನನ್ನ ಪ್ರಿಯನು, ಕಃ ಯಾರು ?, ಅಸ್ಮಿ-ನಾನು, ಕಾ-ಯಾರು ?, ರತಂ ನು-ರತಿಸುಖವಾದರೋ, ಕಥಂ ವಾ-ಯಾವ ರೀತಿಯದು, ಇತಿ-ಹೀಗೆಂಬ, ಸ್ಮೃತಿಃ-ನೆನಪು, ಮೇ-ನನಗೆ, ಸ್ವಲ್ಪಾಪಿ-ಸ್ವಲ್ಪವೂ ಕೂಡ, ನ-ಇಲ್ಲ.

ನನ್ನ ಪ್ರಿಯತಮನು ಹಾಸಿಗೆಯ ಬಳಿಗೆ ಬರಲು, ಸೀರೆಯ ಗಂಟು ತಾನಾಗಿಯೇ ಸಡಿಲಿ ಜಾರಿಹೋಯಿತು. ಡಾಬಿನ ಹಿಡಿತದಿಂದ ನುಸುಳಿದ ಉಟ್ಟ ಬಟ್ಟೆ ನಿತಂಬಪ್ರದೇಶದಲ್ಲಿ ಮಾತ್ರ ಸ್ವಲ್ಪಭಾಗ ನಿಂತಿತು. ಸಖಿ, ಈಗ ನನಗೆ ತಿಳಿದಿರುವುದು ಇಷ್ಟು ಮಾತ್ರ. ಆ ನನ್ನ ಇನಿಯನ ಅಂಗಸಂಗವಾದೊಡನೆಯೇ ಅವನಾರು, ನಾನಾರು, ರತಿಸುಖ ಯಾವ ರೀತಿಯದು ಇವೊಂದೂ ನನಗೆ ಸ್ವಲ್ಪವೂ ನೆನಪಿಲ್ಲ.

೯೯

ಎಲ್ಲೆಲ್ಲಿಯೂ ನನ್ನ ಪ್ರಿಯೆ ಕಾಣುತ್ತಿದ್ದಾಳೆ.

**ಪ್ರಾಸಾದೇ ಸಾ ದಿಶಿ ದಿಶಿ ಚ ಸಾ ಪೃಷ್ಠತಃ ಸಾ ಪುರಃ ಸಾ**
**ಪರ್ಯಂಕೇ ಸಾ ಪಥಿ ಪಥಿ ಚ ಸಾ ತದ್ವಿಯೋಗಾತುರಸ್ಯ ।**
**ಹಂ ಹೋ ಚೇತಃ ಪ್ರಕೃತಿರಪರಾ ನಾಸ್ತಿ ಮೇ ಕಾಪಿ ಸಾ ಸಾ**
**ಸಾ ಸಾ ಸಾ ಸಾ ಜಗತಿ ಸಕಲೇ ಕೋಽಯಮದ್ವೈತವಾದಃ ॥**

ತತ್-ಆ ಪ್ರಿಯತಮೆಯ, ವಿಯೋಗಾತುರಸ್ಯ-ಅಗಲಿಕೆಯಿಂದಕೊರಗುತ್ತಿರುವ, ಮೇ-ನನಗೆ, ಪ್ರಾಸಾದೇ-ಉಪ್ಪರಿಗೆಯಲ್ಲಿಯೂ, ಸಾ-ಅವಳೇ; ದಿಶಿ ದಿಶಿ-ದಿಕ್ಕುದಿಕ್ಕುಗಳಲ್ಲಿಯೂ, ಸಾ-ಅವಳೇ; ಪೃಷ್ಠತಃ ಹಿಂಭಾಗದಲ್ಲಿಯೂ, ಸಾ-ಅವಳೇ; ಪುರಃ-ನನ್ನ ಮುಂಗಡೆಯಲ್ಲಿಯೂ, ಸಾ-ಅವಳೇ; ಪಥಿ ಪಥಿ-ದಾರಿದಾರಿಯಲ್ಲಿಯೂ, ಸಾ-ಅವಳೇ, ಹಂ ಹೋ-ಅಯ್ಯೋ; ಮೇ-ನನ್ನ, ಚೇತಃಪ್ರಕೃತಿಃ-ಮನೋವ್ಯಾಪಾರವೂ, ಅಪರಾ-ಬೇರೆಯಾಗಿ, ನಾಸ್ತಿ-ಇಲ್ಲ, ಕಾಪಿ-ಬೇರೊಬ್ಬಳೂ, ಸಾ ಸಾ-ಅವಳೇ, ಅವಳೇ; ಸಕಲೇ-ಎಲ್ಲ ಭಾಗದ, ಜಗತಿ-ಪ್ರಪಂಚದಲ್ಲಿ, ಸಾ ಸಾ ಸಾ ಸಾ ಅವಳೇ, ಅವಳೇ, ಅವಳೇ, ಅವಳೇ. ಅಯಂ-ಈ ಅದ್ವೈತವಾದಃ-ಅಭೇದ ತಾದಾತ್ಮ್ಯವಾದ, ಕಃ-ಎಂಥದ್ದು ?

ಪ್ರಿಯತಮೆಯ ಅಗಲಿಕೆಯಿಂದ ಕೊರಗುತ್ತಿರುವ ನನಗೆ ಉಪ್ಪರಿಗೆಯಲ್ಲಿಯೂ ಅವಳೇ, ದಿಕ್ಕುದಿಕ್ಕುಗಳಲ್ಲಿಯೂ ಅವಳೇ, ಹಿಂಭಾಗದಲ್ಲಿ ಅವಳೇ, ಮುಂದುಗಡೆಯಲ್ಲಿಯೂ ಅವಳೇ, ಮಂಚದಲ್ಲಿ ಅವಳೇ, ದಾರಿದಾರಿಯಲ್ಲಿಯೂ ಅವಳೇ. ಅಯ್ಯೋ, ನನ್ನ ಮನೋವ್ಯಾಪಾರ ಅವಳನ್ನು ಬಿಟ್ಟು ಬೇರೆ ಇಲ್ಲವೇ ಇಲ್ಲವಾಗಿದೆ. ಬೇರೊಬ್ಬಳೂ ನನ್ನ ಪ್ರಿಯತಮೆಯಾಗಿಯೇ ತೋರುತ್ತಿರುವಳು. ಹೆಚ್ಚೇನು ? ಈ ಜಗತ್ತಿನ ಎಲ್ಲ ಭಾಗಗಳಲ್ಲಿಯೂ ಅವಳೇ, ಅವಳೇ, ಅವಳೇ, ಅವಳೇ. ಈ ಅಭೇದ ತಾದಾತ್ಮ್ಯವಾದ ಎಂಥದ್ದು ?

೧೦೦

ಚೆಲುವೆಯ ಅಂದವಾದ ಮುಖ ನಿನ್ನನ್ನು ಬಹುಕಾಲ ಕಾಪಾಡಲಿ

**ಆಲೋಲಾಮಲಕಾವಲೀಂ ವಿಲುಲಿತಾಂ ಬಿಭ್ರಚ್ಚಲತ್ಕುಂಡಲಂ**
**ಕಿಂಚಿನ್ಮೃಷ್ಟವಿಶೇಷಕಂ ತನುತರೈಃ ಸ್ವೇದಾಂಭಸಃ ಶೀಕರೈಃ ।**
**ತನ್ವ್ಯಾಯತ್ಸುರತಾಂತತಾಂತನಯನಂ ವಕ್ತ್ರಂ ರತಿವ್ಯತ್ಯಯೇ**
**ತತ್ತ್ವಾಂ ಪಾತು ಚಿರಾಯ ಕಿಂ ಹರಿಹರಬ್ರಹ್ಮಾದಿಭಿರ್ದೈವತೈಃ ॥**

ರತಿವ್ಯತ್ಯಯೇ ಪುರುಷಾಯಿತ ಸಂಭೋಗ ಮಧ್ಯದಲ್ಲಿ, ತನ್ವ್ಯಾಃ-ಕೃಶಾಂಗಿಯಾದ ಯುವತಿಯ, ಯತ್-ಯಾವ, ಮುಖಂ-ಮುಖವು, ಸುರತ ಸಂಭೋಗದ, ಅಂತ ಕೊನೆಯಲ್ಲಿ ತಾಂತ-ಆಯಾಸದಿಂದ ಬಳಲಿದ, ನಯನಂ-ಕಣ್ಣುಳ್ಳ, ವಿಲುಲಿತಾಂ-ಕೆಳಗೆ ಜಾರಿಹೋಗಿ, ಆಲೋಲಾಂ-ಕೊಂಚಮಟ್ಟಿಗೆ ಚಲಿಸುತ್ತಿರುವ, ಅಲಕಾವಲೀಂ-ಮುಂಗುರುಳ ಮಾಲೆಯನ್ನುಳ್ಳ, ಬಿಭ್ರತ್-ಕಿವಿಯನ್ನು ಅಲಂಕರಿಸಿ, ಚಲತ್-ಅಲುಗಾಡುತ್ತಿರುವ, ಕುಂಡಲಂ-ಓಲೆಯನ್ನುಳ್ಳ, ತನುತರೈಃ-ಅತ್ಯಲ್ಪವಾದ, ಸ್ವೇದಾಂಭಸಃ-ಬೆವರಿನ, ಶೀಕರೈಃ-ಹನಿಗಳಿಂದ, ಕಿಂಚಿತ್-ಸ್ವಲ್ಪಮಟ್ಟಿಗೆ, ಮೃಷ್ಟವಿಶೇಷಕಂ-ಅಳಿಸಿದ ತಿಲಕವುಳ್ಳದ್ದಾಗಿರುವ, ತತ್-ಆ ತೆರನಾದ ಸುಂದರ ಯುವತಿಯ ಮುಖ, ತ್ವಾಂ-ನಿನ್ನನ್ನು, ಚಿರಾಯ-ಬಹುಕಾಲ, ಪಾತು-ಕಾಪಾಡಲಿ ಹರಿ-ವಿಷ್ಣು, ಹರ-ಈಶ್ವರ, ಬ್ರಹ್ಮ+ಆದಿಭಿಃ-ಬ್ರಹ್ಮನೇ ಮೊದಲಾದ, ದೈವತೈಃ-ದೇವತೆಗಳಿಂದ, ಕಿಂ-ಏನು ತಾನೆ ಪ್ರಯೋಜನ?

ವಿಪರೀತ ರತಿ ಕ್ರೀಡೆಯಲ್ಲಿ, ಸಂಭೋಗದ ಕೊನೆಯಲ್ಲಿ ಆಯಾಸದಿಂದ ಬಳಲಿರುವ ಕಣ್ಣು, ಕೆಳಗೆ ಜಾರಿ ಕೊಂಚಮಟ್ಟಿಗೆ ಅಲುಗಾಡುತ್ತಿರುವ ಮುಂಗುರುಳಮಾಲೆ, ಕಿವಿಯನ್ನು ಅಲಂಕರಿಸಿ ಚಲಿಸುತ್ತಿರುವ ಓಲೆ, ಕಿರುಬೆಮರಿನ ಹನಿಗಳಿಂದ ಸ್ವಲ್ಪಮಟ್ಟಿಗೆ ಅಳಿಸಿದ ತಿಲಕ, ಇವುಗಳಿಂದೊಡಗೂಡಿದ ಬಡನಡುವಿನ ಚೆಲುವೆಯ ಮುಖ ನಿನ್ನನ್ನು ಬಹುಕಾಲ ಕಾಪಾಡಲಿ! ಹರಿಹರಬ್ರಹ್ಮರೇ ಮೊದಲಾದ ದೇವತೆಗಳಿ[illegible] ?

